# "ಇಪ್ಪತ್ತೊಂದನೇ ಶತಮಾನದ ಕನ್ನಡ ಕಾವ್ಯ : ಒಂದು ಅಧ್ಯಯನ"

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ


ನಿಬಂಧಕಾರರು

**ಆರ್. ಸುಧೀಂದ್ರಕುಮಾರ್**
ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಪ್ರಧಾನ್ ಗುರುದತ್ತ**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
ಹಾಗೂ ಕುವೆಂಪು ಭಾಷಾಭಾರತಿ ಅಧ್ಯಕ್ಷರು





**ಕನ್ನಡ ವಿಶ್ವವಿದ್ಯಾಲಯ, ಹಂಪಿ**
೨೦೦೮-೦೯

# “ಇಪ್ಪತ್ತೊಂದನೇ ಶತಮಾನದ ಕನ್ನಡ ಕಾವ್ಯ : ಒಂದು ಅಧ್ಯಯನ”

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ


ನಿಬಂಧಕಾರರು

**ಆರ್. ಸುಧೀಂದ್ರಕುಮಾರ್**
ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು





ಮಾರ್ಗದರ್ಶಕರು

**ಡಾ. ಪ್ರಧಾನ್ ಗುರುದತ್ತ**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಕುವೆಂಪು ಭಾಷಾಭಾರತಿ ಅಧ್ಯಕ್ಷರು
ಬೆಂಗಳೂರು






**ಕನ್ನಡ ವಿಶ್ವವಿದ್ಯಾಲಯ, ಹಂಪಿ**
೨೦೦೮-೦೯

# ದೃಢೀಕರಣಪತ್ರ

೨೦೦೮–೦೯ನೇ ಸಾಲಿನಲ್ಲಿ ಕ್ರಮ ಸಂಖ್ಯೆ KVTMKS - K0105 ರ ಹಂಪಿ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ ಆರ್.ಸುಧೀಂದ್ರಕುಮಾರ್ ಅವರು ನನ್ನ ಮಾರ್ಗದರ್ಶನದಲ್ಲಿ **''ಇಪ್ಪತ್ತೊಂದನೇ ಶತಮಾನದ ಕನ್ನಡ ಕಾವ್ಯ : ಒಂದು ಅಧ್ಯಯನ''** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲು ಸಿದ್ದಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ಪ್ರಧಾನ್ ಗುರುದತ್ತ

**(ಡಾ. ಪ್ರಧಾನ್ ಗುರುದತ್ತ)**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಕುವೆಂಪು ಭಾಷಾಭಾರತಿ ಅಧ್ಯಕ್ಷರು

ಮೈಸೂರು
ದಿನಾಂಕ: 15-09-2009

# ಅಭ್ಯರ್ಥಿಯ ಘೋಷಣಾಪತ್ರ

**"ಇಪ್ಪತ್ತೊಂದನೇ ಶತಮಾನದ ಕನ್ನಡ ಕಾವ್ಯ : ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ KVTMKS - 00K0105ರ ವಿದ್ಯಾರ್ಥಿಯಾದ ನಾನು ೨೦೦೮–೦೯ನೇ ಸಾಲಿನ ಪರೀಕ್ಷೆಗಾಗಿ **ಡಾ. ಪ್ರಧಾನ್ ಗುರುದತ್ತ, ನಿವೃತ್ತ ಕನ್ನಡ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ ಹಾಗೂ ಕುವೆಂಪು ಭಾಷಾಭಾರತಿ ಅಧ್ಯಕ್ಷರು** ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಸಂಪ್ರಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಆರ್. ಸುಧೀಂದ್ರಕುಮಾರ್

**(ಆರ್.ಸುಧೀಂದ್ರಕುಮಾರ್)**
೨೦೦೮–೦೯ನೇ ಸಾಲಿನ ಎಂ.ಫಿಲ್. ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮೈಸೂರು
ದಿನಾಂಕ : 15-09-2009

# ಪ ರಿ ವಿ ಡಿ



*****

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಇಪ್ಪತ್ತನೆಯ ಶತಮಾನದ ಹೊಸಗನ್ನಡ ಸಾಹಿತ್ಯ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ, ನವ್ಯೋತ್ತರ ಪಂಥ-ಘಟ್ಟಗಳನ್ನು ಕಂಡಿದ್ದು ಈಗ ಇತಿಹಾಸದ ಒಂದು ಭಾಗ. ಕಳೆದ ಶತಮಾನದಲ್ಲಿ ಮುಖ್ಯವಾಗಿ ದ.ರಾ.ಬೇಂದ್ರೆ-ಯಂತಹ ಮೇರುಕವಿ, ಪುತಿನ, ಅಡಿಗರಂತಹ ಮಹತ್ವದ ಕವಿಗಳೂ ಸೇರಿದಂತೆ ಗಂಗಾಧರಚಿತ್ತಾಲ, ಚಂದ್ರಶೇಖರಕಂಬಾರ, ಎ.ಕೆ.ರಾಮಾನುಜನ್, ಕೆ.ಎಸ್.ನರಸಿಂಹ-ಸ್ವಾಮಿ, ಕೆ.ವಿ.ತಿರುಮಲೇಶ್, ಸು.ರಂ.ಎಕ್ಕುಂಡಿ, ರಾಮಚಂದ್ರಶರ್ಮ, ಎಚ್.ಎಸ್.ಶಿವ-ಪ್ರಕಾಶ್, ಸಿದ್ಧಲಿಂಗಯ್ಯ ಹೀಗೆ ಕನ್ನಡ ಕಾವ್ಯವನ್ನು ಎತ್ತಿ ಹಿಡಿದ ಕವಿಗಳ ಒಂದು ದಂಡು ಕಾಣಿಸುತ್ತದೆ. ಇಪ್ಪತ್ತೊಂದನೇ ಶತಮಾನದ ಈ ಆರಂಭದಲ್ಲಿ ನಮ್ಮ ಸಾಹಿತ್ಯ ನೆಲದಲ್ಲಿ ನಿರ್ದಿಷ್ಟ ಚಳವಳಿ, ಸಿದ್ಧಾಂತ ಪ್ರಣೀತವಾದ ಕಾವ್ಯ ರಚನೆಗಳು ಸದ್ಯ ಕಂಡುಬರುತ್ತಿಲ್ಲ. ಈ ಪ್ರಕ್ರಿಯೆಯೂ ಒಂದು ಖಾಲಿಭಿತ್ತಿಯಂತೆ ಕಾಣಿಸಿದರೂ ಇದೇ ಮುಕ್ತ ವಾತಾವರಣವನ್ನೂ ಬರಹಗಾರರಿಗೆ ಕಲ್ಪಿಸಿಕೊಟ್ಟಿದೆ.

ಏನಿಲ್ಲವೆಂದರೂ ಒಂದು ವರ್ಷಕ್ಕೆ ನೂರು ಕವನ ಸಂಕಲನಗಳು ಮುದ್ದಾಗಿ ಮುದ್ರಣವಾಗುತ್ತಿರುವುದನ್ನು ಗಮನಿಸಿದರೆ ಇದರಲ್ಲಿ ಸಾಕಷ್ಟು ಜೊಳ್ಳು ಸೇರಿದೆ ಎನ್ನುವುದನ್ನು ಪ್ರತ್ಯೇಕಿಸಿ ಹೇಳಬೇಕಿಲ್ಲ. ಸಂದರ್ಭ ಹೀಗಿದ್ದಾಗಲೂ, ಕಾವ್ಯದಲ್ಲಿ ಗಂಭೀರವಾಗಿ ತೊಡಗಿಸಿಕೊಂಡವರ ಸಂಖ್ಯೆ ಕಡಿಮೆ ಇದ್ದಾರೆ. ಅಂತವರು ನಮ್ಮ ನಡುವೆ ಇದ್ದಾರೆ, ಬರೆಯುತ್ತಿದ್ದಾರೆ ಎನ್ನುವುದನ್ನು ಮರೆಯುವಂತಿಲ್ಲ. ಅಂತಹ ಪ್ರಾತಿನಿಧಿಕ ಕವಿಗಳನ್ನು, ಅವರ ಕವಿತೆಗಳನ್ನು ಆಯ್ದುಕೊಂಡು ವಿಶ್ಲೇಷಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಇದಕ್ಕೆ ಸಂಬಂಧಿಸಿದಂತೆ ಕೆಲವು ಸಾಹಿತ್ಯಿಕ ಕಾರಣಗಳು, ಪ್ರೇರಣೆಗಳು ಈ ಅಧ್ಯಯನದ ಬೆನ್ನಿಗಿವೆ. ಅವುಗಳೆಂದರೆ,

೧. ಕನ್ನಡ ಕಾವ್ಯದ ಚರ್ಚೆ ಎಂದಾಗ ಅದು ಅಡಿಗ, ಶಿವಪ್ರಕಾಶ್, ಸಿದ್ದಲಿಂಗಯ್ಯನವರಿಗೇ ನಿಂತು ಬಿಡುವ ಜನಪ್ರಿಯ ರೂಢಿಯ ಆಚೆಗೆ ಏನಿದೆ? ಮತ್ತು ಏನಾಗುತ್ತಿದೆ? ಎಂದು ಕಂಡುಕೊಳ್ಳುವುದು.

೨. ಕಳೆದ ಎರಡೂವರೆ ದಶಕದಲ್ಲಿ ಊಹಿಸಲಾರದ ಹಲವು ಪಲ್ಲಟಗಳನ್ನು, ನೋವನ್ನು ಅನುಭವಿಸಿರುವ ನಮ್ಮ ಸಮಾಜ, ಅದರ ಒಂದು ಭಾಗವಾಗಿರುವ ಕಾವ್ಯದ ಸ್ವರೂಪವನ್ನು ಪರಿಶೀಲಿಸುವುದು.

೩. ಸೀಮಿತ ವಲಯದಲ್ಲಿ ಗುರುತಿಸಲ್ಪಡುತ್ತಿದ್ದ ತಲ್ಲಣಗಳು ಇದೀಗ ಕನ್ನಡದ ತಲ್ಲಣಗಳಾಗುತ್ತಿರುವಾಗ ಕಾವ್ಯದ ಲಕ್ಷಣ, ಕಾವ್ಯ ನಿರ್ವಚನವನ್ನು ದುಂಡಾಗಿ

ಕಳೆದ ಶತಮಾನದ ಮಧ್ಯಭಾಗದಂತೆಯೆ ನಿರ್ವಹಿಸಲು ಸಾಧ್ಯವೇ? ಎಂಬ ಪ್ರಶ್ನೆಯನ್ನು ಎದುರುಗೊಳ್ಳುವುದು.

೪. ಈ ಇಪ್ಪತ್ತೊಂದನೆ ಶತಮಾನದ ಆರಂಭದಲ್ಲಿ ದಟ್ಟವಾಗಿ ಹಬ್ಬಿಕೊಳ್ಳುತ್ತಿರುವ ಸಾಂಸ್ಕೃತಿಕ ನೆನಪುಗಳು ಅದರ ಕಾರಣವನ್ನು ಕಂಡುಕೊಳ್ಳುವುದು.

೫. ಬೆಳೆಯುತ್ತಿರುವ ನಗರ ಜೀವನ ಅಲ್ಲಿಂದ ಹೊರ ಬರುತ್ತಿರುವ ಕಾವ್ಯ ಹರವು, ಮಹತ್ವವನ್ನು ಪರೀಕ್ಷಿಸುವುದು.

೬. ಹಿಂದಿನಿಂದಲೂ ಕನ್ನಡ ಕಾವ್ಯವನ್ನು ಪೋಷಿಸಿ ಮಾರ್ಗದರ್ಶನ ಮಾಡುತ್ತಾ ಬಂದಿರುವ ಕನ್ನಡ ಕಾವ್ಯ ವಿಮರ್ಶೆ ಸದ್ಯ ಯಾವ ದಿಕ್ಕಿನತ್ತ ತನ್ನ ಹೆಜ್ಜೆ ಇಡುತ್ತಿದೆ? ಎಂಬುದನ್ನು ಗಮನಿಸುವುದು.

ಈ ಮೇಲಿನ ಕಾರಣಗಳೊಂದಿಗೆ ಸಮಕಾಲೀನ ವಿಮರ್ಶಕರು, ಚಿಂತಕರು ಕಾವ್ಯಕ್ಕೆ ಸಂಬಂಧಿಸಿದಂತೆ ನೀಡಿರುವ ಪ್ರತಿಕ್ರಿಯೆಯೂ ಈ ಪ್ರಬಂಧಕ್ಕೆ ಪ್ರೇರಣೆ ನೀಡಿದೆ.

೧. 'ಈಗಲೂ ಬಹುತೇಕ ಕವಿಗಳು ತಮ್ಮ ಸುಕುಮಾರ ತೆವಲುಗಳನ್ನೇ ತೀವ್ರ ಭಾವಾಭಿವ್ಯಕ್ತಿಯೆಂಬಂತೆ ತೇಲಿ ಬಿಡುತ್ತಿದ್ದಾರೆ. ಇನ್ನು ಕೆಲವು ಕವಿಗಳು ಸದ್ಯದ ಸ್ಥಿತಿಯನ್ನು ಪೂರ್ತ ಕಡೆಗಣಿಸಿ, ಅನಾದಿಯೂ ಅನಂತವೂ ಆದ ಸೃಷ್ಟಿಯ ರಹಸ್ಯವನ್ನು ಬಿಡಿಸುವ ದೇವರ ಜವಾಬ್ದಾರಿಯನ್ನು ತಮಗೆ ತಾವೇ ಆರೋಪಿಸಿಕೊಂಡಿದ್ದಾರೆ. ಕನ್ನಡದ ಸಮಕಾಲೀನ ಕವಿಗಳ ಭಾವಕೋಶದ ಹಗುರತೆ ಅಸಹನೀಯವಾಗಿದೆ.'[೧]

೨. 'ವರ್ಷಪ್ರತಿ ನಮ್ಮ ಸಂವೇದನೆಯನ್ನು ತಾಕುವಂತಹ ಕವನಗಳ ಸಂಖ್ಯೆ ಬಹಳ ಹೆಚ್ಚಿಲ್ಲ. ಒಂದು ಲೆಕ್ಕದ ಪ್ರಕಾರ ಹೆಚ್ಚು ಕಳಪೆ ಉತ್ಪಾದನೆ ಮಾಡುತ್ತಿರು–ವುದರಲ್ಲಿ ಕವಿ ಗಣವೇ ಅಗ್ರಸ್ಥಾನದಲ್ಲಿದೆ! ಒಂದು ಸಂಸ್ಕೃತಿಯಲ್ಲಿ ಕಾವ್ಯ ಆಡುವ ಪಾತ್ರವು ತುಂಬ ಮಹತ್ವದ್ದು ಅದನ್ನು ಅಲ್ಲಗಳೆಯಬೇಕಿಲ್ಲ. ಆದರೆ ಕಾವ್ಯರಚನೆಯು ಹುಟ್ಟಿಸಿರುವ ಯಜಮಾನಿಕೆಯ ಪರಿಣಾಮಗಳು ಅಬದ್ಧವಾಗಿವೆ.[೨]

೩. 'ಹಳಗನ್ನಡ ಕಾವ್ಯ ಬಿಡಿ, ಹೊಸಗನ್ನಡದ ಬೇಂದ್ರೆ, ಪು.ತಿ.ನ. ಇಂತಹ ಕವಿಗಳನ್ನು ಓದದೇ ಬರೇ ವಾರಪತ್ರಿಕೆ, ಪುರಾವಣಿಗಳಲ್ಲಿ ಫಿಲ್ಲರ್‌ಗಳಂತೆ

---

೧. ಜಿ.ರಾಜಶೇಖರ್, ನೀರಗಂಧ, ಪು. ೬
೨. ರಹಮತ್ ತರೀಕೆರೆ, ಕತ್ತಿಯಂಚಿನ ದಾರಿ, ಪು. ೨೪೮.

ಬಳಕೆಯಾಗುವ ಹನಿಗವನ, ಬಿಡಿಕವನಗಳನ್ನಷ್ಟೆ ಓದಿದ ಪೀಳಿಗೆಯೊಂದು ಕವಿತೆಗೆ ತೊಡಗಿದೆ.'[೧]

೪. 'ಹೊಸಬರ ಕಾವ್ಯ ತನ್ನ ಸುತ್ತಲ ಬದುಕಿನ ಎಲ್ಲವನ್ನೂ ಒಳಗೊಂಡಿದೆ. ಚಳುವಳಿಗಳಿಂದ ರೂಪುಗೊಂಡ ತಾತ್ವಿಕ ಎಚ್ಚರ ಒಂದು ಕಡೆಯಾದರೆ, ಅವುಗಳ ಮಿತಿಗಳ ಬಗೆಗಿನ ತಿಳುವಳಿಕೆ ಮೌನವಾಗಿ ತನ್ನ ಕೆಲಸ ಮಾಡತೊಡಗಿದೆ.'[೨]

೫. 'ಸಮಕಾಲೀನ ಕನ್ನಡ ಕಾವ್ಯದಲ್ಲಿ ಒಂದು ಕಡೆಯಿಂದ ಹೊಸತನ್ನು ಹವಣಿಸುವ ಬರವಣಿಗೆ ಮಾಡುತ್ತಿದ್ದರೆ ಮತ್ತೊಂದು ಕಡೆ ಈಗಾಗಲೇ ಚರಿತ್ರೆಯಲ್ಲಿ ದಾಖಲಾದ್ದನ್ನು ಹೊಸ ದೃಷ್ಟಿಕೋನದಿಂದ ಪುನರ್‌ಮೌಲೀಕರಿಸಿ ಸಮಕಾಲೀನ –ದಲ್ಲಿ ಸಮೀಕರಿಸುವ ಪ್ರಯತ್ನ ನಡೆಯುತ್ತಿದೆ. ವಿವಿಧ ಸೈದ್ಧಾಂತಿಕ ಹಿನ್ನೆಲೆಯ, ಹತ್ತು ಹಲವು ಧ್ವನಿಗಳು ಒಟ್ಟಿಗೇ ಒಂದೇ ಕಾಲಘಟ್ಟದ ಪ್ಲಾಟ್‌ಫಾರಮ್ಮಿನ ಮೇಲೆ ಇಷ್ಟು ಸುಂದರವಾಗಿ ಕಂಡುಬರುತ್ತಿರುವುದು ಹೊಸಗನ್ನಡದ ಸಂದರ್ಭದಲ್ಲಿ ಮೊದಲ ಬಾರಿಗೆ ಎನ್ನುವುದು ಒಪ್ಪಿಕೊಳ್ಳಬೇಕಾದ ಮಾತು.'[೩]

೬. ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ, ದಲಿತ ಬಂಡಾಯೋತ್ತರ ಮುಂತಾದ ಪರಿಭಾಷಾ ಸ್ಥಾವರಗಳ ಕೊಟ್ಟಿಗೆಯಲ್ಲಿ ಸಾಹಿತ್ಯ ಕೃತಿಗಳನ್ನು ದನಗಳಂತೆ ಕಟ್ಟಿಹಾಕಿ ಮೇಯಿಸುತ್ತಾ ಲಾಭ ಮಾಡಿಕೊಳ್ಳುವ ವ್ಯಾಪಾರಿ ಮನೋಧರ್ಮದಿಂದ ಮುಕ್ತರಾದಾಗಲೇ ಹೊಸ ಸಾಹಿತ್ಯ ಮೀಮಾಂಸೆ ಸಾಧ್ಯ.![೪]

ಈ ಅಧ್ಯಯನದಲ್ಲಿ ಮಹಾಕಾವ್ಯಗಳನ್ನು, ಈಗಾಗಲೇ ಸಾಕಷ್ಟು ಚರ್ಚೆಗೆ ಒಳಗಾಗಿರುವ ಕವಿ–ಕವಿತೆಗಳನ್ನು ಆಯ್ದುಕೊಂಡಿಲ್ಲ. ಅದಕ್ಕೆ ಈ ನಿಬಂಧದ ಪುಟ ಮಿತಿ ಕಾರಣವಾಗಿದೆ. ಚುಟುಕ, ಹನಿಗವಿತೆ ಇವೆ ಮೊದಲಾದ 'ಮಿನಿಸಾಲು'ಗಳು ಕಾವ್ಯದ ಆವರಣಕ್ಕೆ ಬರುವುದಿಲ್ಲ ಎಂಬ ನಂಬಿಕೆಯಿಂದ ಕೈ ಬಿಡಲಾಗಿದೆ.

ಇಪ್ಪತ್ತೊಂದನೇ ಶತಮಾನದಲ್ಲಿ ಬರೆಯುತ್ತಿರುವವರನ್ನೆಲ್ಲಾ ಒಂದು ಕಡೆ ಗುಡ್ಡೆ ಹಾಕುವುದು ಅಥವಾ ಈ ಕಾಲದೊಳಗೆ ಕವಿಗಳು ಬರೆದದ್ದನ್ನೆಲ್ಲ ತಬ್ಬಿಕೊಳ್ಳುವುದು ಈ ಪ್ರಬಂಧದ ಉದ್ದೇಶವಲ್ಲ.

---

೧. ಜಯಂತ ಕಾಯ್ಕಿಣಿ, ಶಬ್ದತೀರ, ಪು. ೧೬೨
೨. ಡಿ.ವಿ. ಪ್ರಹ್ಲಾದ್, ಸಂಚಯ–೨೫, ಪು. ೬
೩. ಮಮತಾ ಜಿ.ಸಾಗರ, ಹೀಗೆ ಹಾಳೆಯ ಮೇಲೆ ಹಾಡು, ಪು. ೫
೪. ಚಂದ್ರಶೇಖರನಂಗಲಿ, ಸಂಕ್ರಮಣ–೨೦೦೬, ಪು. ೨೫

ಇಲ್ಲಿನ ಅಧ್ಯನಗಳಲ್ಲಿ ಕ್ರಮವಾಗಿ ಈ ಶತಮಾನದ ಆರಂಭದಲ್ಲಿ ಹೆಜ್ಜೆ ಊರಿರುವ ಕವಿಗಳು, ಹೆಜ್ಜೆ ಊರುತ್ತಿರುವ ಕವಿಗಳು, ಹೆಜ್ಜೆ ಇಕ್ಕಿರುವ ಕವಿಗಳು ಎಂಬ ವಿಭಾಗವನ್ನು ಮಾಡಿಕೊಂಡು ಈ ಕವಿಗಳ ಮುಖ್ಯ ಕವಿತೆಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಒಟ್ಟಾರೆ ಈ ಎಲ್ಲ ಅಧ್ಯಯನಗಳ ಆಚೆಗೂ ನಡೆದಿರುವ ಸದ್ಯದ ಕನ್ನಡ ವಿಮರ್ಶೆಯ ಒಂದು ನೋಟವು ಇಲ್ಲಿದೆ. ಉಪಸಂಹಾರದಲ್ಲಿ ಈ ಪ್ರಬಂಧದ ಒಳಗೂ-ಹೊರಗಿನ ನೋಟವನ್ನು ಕೆಲವು ಸಾಧ್ಯತೆಗಳನ್ನು ತಿಳಿಸಲಾಗಿದೆ.

ಕನ್ನಡ ಕಾವ್ಯ ತನ್ನ ಚಲನಶೀಲತೆಯ ಮುಂದುವರಿಕೆಯಾಗಿ ಬಹುರೂಪದಲ್ಲಿ ವ್ಯಕ್ತವಾಗುತ್ತಿರುವುದನ್ನು ಈ ಅಧ್ಯಯನ ಕಟ್ಟಿಕೊಡುತ್ತದೆ.

ಈ ಪ್ರಬಂಧ ಅಧ್ಯಯನ ಮಾತ್ರವೇ ಹೊರತು ಮೌಲ್ಯಮಾಪನವಲ್ಲ ಎಂಬುದನ್ನು ವಿನಮ್ರವಾಗಿ ಹೇಳಬೇಕಿದೆ.

***

# ಅಧ್ಯಾಯ – ೧

## ಹೆಜ್ಜೆ ಊರಿರುವ ಕವಿಗಳು–ಕವಿತೆಗಳು

ನೆನಪು ನೆರಳುಗಳಾಗಿ, ನೆರಳು ಚಿತ್ರಗಳಾಗಿ
ರಂಗದ ಮೇಲೆ ಗಂಭೀರ ನಡೆದಾಡುತ್ತವೆ
ವಿಂಗಿನ ಕಡೆ, ಖಾಲಿ ಖುರ್ಚಿಯ ಕಡೆ ಪ್ರಶ್ನೆಗಳನ್ನು
ಅಗಿದುಗಿದು ಎಸೆದು ರಾಚಿ ಉತ್ತರಕ್ಕಾಗಿ ಹಾರೈಸುತ್ತ
ಹರಿದಾಡುತ್ತವೆ
ಈ ನಡುವೆ ನಾವಿದ್ದೇವೆ –ಅದೇ ರಂಗಭೂಮಿ ಮತ್ತು ನಾನು
ಆಪಾದಿಸುತ್ತ,
ಸಮರ್ಥಿಸಿಕೊಳ್ಳುತ್ತ
ಪರಸ್ಪರ ನೋವಿನಲ್ಲಿ ಬೆರಳಾಡಿಸುತ್ತ

(ರಂಗಭೂಮಿ ಮತ್ತು ನಾನು: ಚಂದ್ರಶೇಖರ ಕಂಬಾರ)

ಕಂಬಾರರ ಈ ಕವಿತೆಯಂತೆಯೇ ಇಪ್ಪತ್ತೊಂದನೇ ಶತಮಾನದ ಕನ್ನಡ ಕಾವ್ಯದ ಭೂಮಿಕೆಯಿದೆ, ಕವಿಯೂ ಇದ್ದಾನೆ. ಕಾವ್ಯದ ಮುಂದೆ ಹುಟ್ಟಿಕೊಂಡ ಪ್ರಶ್ನೆಗಳು, ಕಂಡುಕೊಂಡ ಮಿತಿಗಳು ಕಾವ್ಯ ರಂಗಭೂಮಿಯ ಮೇಲೆ ನಡೆದುಕೊಂಡೇ ಬಂದಿವೆ. ಕಳೆದ ಶತಮಾನದಲ್ಲಿ ಬರೆಯುತ್ತಿದ್ದ ಕವಿಗಳು ಈ ಕಾಲದಲ್ಲಿಯೂ ಬರೆಯುತ್ತಿದ್ದರಾದರೂ ಅವರಲ್ಲಿ ಕೆಲವರು ಇದೀಗ ತಮ್ಮ ಕಾವ್ಯದ ಹಾದಿಯನ್ನು ಹೆಚ್ಚು ಸ್ಪಷ್ಟ ಮಾಡಿಕೊಂಡಂತೆ ಕಾಣಿಸುತ್ತಿದೆ. ಹೊಸ ಶತಮಾನದ ಆರಂಭದ ಈ ಕಾಲಘಟ್ಟದಲ್ಲಿ ಹಲವು ಪಲ್ಲಟಗಳಾಗುತ್ತಿವೆ, ಬಿಕ್ಕಟ್ಟುಗಳು ಎದುರಾಗುತ್ತಿವೆ. ಆದರೆ ಸದ್ಯದ ಕಾವ್ಯ ಈ ಹಿಂದಿನ ದಲಿತ–ಬಂಡಾಯದ ಘೋಷಣೆ ಪ್ರಣಾಳಿಕೆ ಮೊದಲಾದ ಸಿದ್ಧರೂಪವನ್ನು ಹೊರಡಿಸುತ್ತಿಲ್ಲ ಎಂಬುದು ಸ್ಪಷ್ಟವಾಗಿದೆ.

ಪ್ರಸ್ತುತ ಹೊಸ ಶತಮಾನದ ದಲಿತ ಕಾವ್ಯ ಎನ್ನುವ ಕನ್ನಡಕಾವ್ಯದಲ್ಲಿ ಎರಡು ಮುಖ್ಯ ಧಾರೆಗಳು ಕಾಣಿಸುತ್ತಿವೆ.

೧) ಹಿಂದಣ ಹಜ್ಜೆ

೨) ಇಂದಿನ ಹೆಜ್ಜೆ

ಹಿಂದಣ ಹೆಜ್ಜೆಯನ್ನು ಅರಸುತ್ತಾ ಹೊರಟಿರುವವರಲ್ಲಿ ಕೆ.ಬಿ. ಸಿದ್ದಯ್ಯ, ವಡ್ಡಗೆರೆ ನಾಗರಾಜಯ್ಯ, ಮಹದೇವ ಶಂಕನಪುರ ಇವರದು ಒಂದು ಹಾದಿಯಾಗಿದೆ. ಇಂದಿನ ಹೆಜ್ಜೆಯಲ್ಲಿ ನಿಂತು ಮೂಡ್ನಕೂಡು ಚಿನ್ನಸ್ವಾಮಿ, ಎನ್.ಕೆ.ಹನುಮಂತಯ್ಯ ಮೊದಲಾದವರು ಕಾವ್ಯದಲ್ಲಿ ತೊಡಗಿದ್ದಾರೆ. ಈ ಸಾಲಿನಲ್ಲಿ **ಅರವಿಂದ ಮಾಲಗತ್ತಿ**

ಅವರ ಕಾವ್ಯ ಪ್ರಮುಖವಾಗಿ ಕಂಡುಬರುತ್ತದೆ. ಈ ಮೇಲೆ ಸೂಚಿಸಿದ ಕಾವ್ಯದ ಎರಡೂ ಹಾದಿಯ ಗುರಿ ಸಮಕಾಲೀನಕ್ಕೆ ಸ್ಪಂದಿಸುವುದೇ ಆಗಿದೆ. ಇವೆರಡೂ ಕೂಡ ಸೃಜನಶೀಲ ಹುಡುಕಾಟದ ಒಂದು ಭಾಗವೇ ಆಗಿದೆ ಎಂಬುದನ್ನು ಮರೆಯಬಾರದು. ಅರವಿಂದ ಮಾಲಗತ್ತಿಯವರ ಕಾವ್ಯ ಎಂಬತ್ತರ ದಶಕದ ಗುಂಗಿನ ಆಚೆಗೆ ವಿಸ್ತರಿಸುತ್ತಿರುವುದು, ಅಖಂಡವಾಗಿ ತೆತ್ತುಕೊಳ್ಳುತ್ತಿರುವುದು ಈ ಹೊತ್ತಿಗೆ ಮಹತ್ವದ್ದಾಗಿದೆ.

ಹುಟ್ಟಿ ಬಾರ್ದದ್ರೆಪ್ಪೋ ಹುಟ್ಟಬಾರ್ದು
ಏಳೇಳ ಜಲ್ಮದಾಗ ಈ ಭೂಮಿ ಮ್ಯಾಗ
ಹೊಲಿ–ಮಾದಿಗರಾಗಿ ಹುಟ್ಟಬಾರ್ದು
(ಕುತ್ತು)

ಇದು ಅಕ್ಷರ ಕಲಿತ ಮೊದಲ ತಲೆಮಾರು ತನಗೆ, ತನ್ನವರಿಗೆ ಆಗುತ್ತಿರುವ ಅವಮಾನಗಳನ್ನು, ಶೋಷಣೆಯನ್ನು ಕಂಡು ಕುದಿಕೊಂಡು ಹುಟ್ಟಿದ ಆಕ್ರೋಶ. ಎರಡು ದಶಕದಷ್ಟು ಕನ್ನಡ ಕಾವ್ಯವನ್ನು ಕಾಡಿದ ಜಾತೀಯತೆ, ಅಸ್ಪೃಶ್ಯತೆ ಇಂದಿಗೂ ಜೀವಂತವಾಗಿದ್ದು ಅದರ ಬೇರುಗಳು ನಗರಕ್ಕೂ ಚಾಚಿಕೊಂಡು ಬಲಗೊಳ್ಳುತ್ತಿವೆ.

ನಿಮ್ಮ ಹೆಸರೇನೋ ನಮ್ಮವರ ಹಾಗಿದೆ
ನೀವು ಕಪ್ಪು, ನಿಮ್ಮ ಮಕ್ಕಳು ಹೆಂಡತಿ ಬೆಳ್ಳಗೆ
ಆದ್ರೆ ಮಕ್ಕಳ ಮುಖ ಮಾತ್ರ ನಿಮ್ಮ ಹಾಗೆ
ಎಂದಾಗ; ಬದುಕಿದೆಯೆಂದು ನಿಟ್ಟುಸಿರು ಬಿಟ್ಟಿದೆ
(ಬಾಡಿಗೆ ಮನೆಯ ಕೋಳಿಗಳ ಬದುಕು)

ಇಂತಹ ಸತ್ಯವನ್ನು ಕಾಣಿಸುವುದಷ್ಟೆ ಆಗಿದಿದ್ದರೆ ಮಾಲಗತ್ತಿಯವರ ಕಾವ್ಯವನ್ನು ಇಲ್ಲಿ ಚರ್ಚೆ ಮಾಡುವ ಅಗತ್ಯವಿರಲಿಲ್ಲ. ಇದನ್ನು ಮೀರಿ ಸಮಕಾಲೀನವಾದ ಸುಡು ವಾಸ್ತವದ ಕುರಿತು ಹೆಚ್ಚು ಕಾವ್ಯಾತ್ಮಕವಾಗಿ ಮಾತನಾಡಿದ್ದು, ಇದರ ಹಿಂದೆ ಇರುವ ಮನಸ್ಸು ಜನಪರವಾಗಿದೆ ಎಂಬುದು ಬಹಳ ಮುಖ್ಯ.

ಬಾಯಿ ಮುಚ್ಚಿ ಮಣ್ಣಿನ ಗಡಿಗೆಯಲಿ
ನೀರೂ ಕುದಿಯುತ್ತಿದೆ
ನೀರು ಕಾಯಿಸುವ ನೆಪದಲಿ
ವಿದೇಶಿ ಸೌದೆಯೋ– ಸೌದೆ – ಬಂದು ಬೀಳುತ್ತಿದೆ
ಹೊರಗಿನ ಉರಿ; ಒಳಗಿನ ಧಗಿ
ಯಾವಾಗ ಸಿಡಿಯುತ್ತದೆಯೋ ಈ ಗಡಿ–ಗೆ ಗೊತ್ತಿಲ್ಲ!
(ಚಟ್ಟ ತೊಟ್ಟಿಲ ಭೂಮಿ)

ಜುಳು ಜುಳು ಹರಿವ ನೀರಲ್ಲೂ ಪಾಚಿಗಟ್ಟುತ್ತಿದೆ
ಹುಲ್ಲು ತಿನ್ನುವ ದನ ಮೆಲುಕು ಹಾಕುತ್ತಿಲ್ಲ
ಗೂಡು ಕಟ್ಟುವ ಗುಬ್ಬಿ ಹೊರ ಬರುತ್ತಿಲ್ಲ
ಇತ್ತ ಮಾವಾಗದೆ, ಅತ್ತ ಬೇವಾಗದೆ ಬಾಡುತಿದೆ ಮರ

(ತೀನಿ ದಾಸ್ಯದ ಕಾಲ)

'ಐ ಲವ್‌ಯು'
ಎನ್ನುತ್ತಲೇ ಬರಿಲಿವೆ 'ಲವ್‌ಬಗ್ಸ್'
ಒಳಗೆ ಗರ್ದಿಗಮ್ಮತ್ತಿನ ಕುಂಚದ ಕುಣಿತ
ಹೊರಗೆ ಗಡ್ಡ ಬೆಳಿಸಿದ ನಿರುದ್ಯೋಗಿ ಆಲದಮರ

(ಭಾರತಾಂಬೆಯ ಉಡಿಯೊಳಗಿನ ಸಾವು ಸಂಕ್ರಾಂತಿ)

ಹೀಗೆ ಬಹುರಾಷ್ಟ್ರೀಯ ಕಂಪನಿಗಳು, ಸಂಸ್ಕೃತಿಯಲ್ಲಾಗುತ್ತಿರುವ ಬದಲಾವಣೆ-ಗಳನ್ನು ಅದರ ಕೇಡುಗಳ ಮೂಲವನ್ನು ಪರಿಶೀಲಿಸುವ ಅರವಿಂದರ ಕಾವ್ಯ ನಮ್ಮ ಕಾಲದ ಅಪೇಕ್ಷೆ, ಜನ ಸಮುದಾಯದ ನಿಟ್ಟುಸಿರನ್ನು ತನ್ನೊಳಗಿಟ್ಟುಕೊಂಡಿದೆ. ಅಸ್ಪೃಶ್ಯತೆಯಷ್ಟೇ ಅಮಾನವೀಯವಾಗುತ್ತಿರುವ ದೇಶದ ಸ್ವರೂಪವನ್ನು ಅದರ ಒಡಲನ್ನು ಬೆಚ್ಚಗಿಡಬೇಕು ಎನ್ನುವ ಭಾವ ಇವರ ಕವಿತೆಗಳಲ್ಲಿ ಮೇಲಿಂದ ಮೇಲೆ ಕಾಣಿಸಿಕೊಳ್ಳುತ್ತದೆ.

ಬೆನ್ನ ಬೆಸುಗೆಯು ಸಾಕು
ಎದೆಯ ಬೆಸುಗೆಯ ಹಾಕು
ಬೇಕು ಬೇಕುಗಳ ನೂಕು
ಮಣ್ಣ ತೊಟ್ಟಿಲಿಗೆ ತಾಕು

(ಗಂಡಭೇರುಂಡ)

ದ್ವಂದ್ವದಲ್ಲಿ ಮುಳುಗಿ ಹೋಗಿರುವ ನಾಡು, ನಾಡಿನ ಜನತೆಯ ಸ್ಥಿತಿಯನ್ನು ಪ್ರತಿಮಾ ವಿಧಾನದಲ್ಲಿ ತೋರುತ್ತಿರುವ ಕವಿ, ಕಡೆಗೂ ನಂಬಿರುವುದು ಹೃದಯ ಮತ್ತು ಮಣ್ಣಿನೊಡನೆಯ ಸಂಬಂಧವನ್ನು ಎನ್ನುವುದು ಬಹಳ ಮುಖ್ಯ. ಕಾಲಕಟ್ಟಳೆಯ ನಾಡಿಯ ಬಡಿತವಾಗಿರುವ ಮಾಲಗತ್ತಿಯವರ ಕಾವ್ಯ ಸದ್ಯ ಬಹುತ್ವದ ಹುಡುಕಾಟಗಳಲ್ಲಿ ಕ್ರಿಯಾಶೀಲವಾಗಿದೆ. ಈ ಹುಡುಕಾಟವನ್ನು 'ಸಿಲಿಕಾನ್ ಸಿಟಿ ಮತ್ತು ಕೋಗಿಲೆ', 'ನಾದ ನಿನಾದ', 'ಮೂರನೆಯ ಕಣ್ಣು', 'ಕಪ್ಪುಕಾವ್ಯ', 'ಮೂಕನಿಗೆ ಬಾಯಿ ಬಂದಾಗ' ಕವನ ಸಂಕಲನಗಳಲ್ಲಿ ಕಾಣಬಹುದು. ಎಲ್ಲಿಗೆ ಕೊಂಡೊಯ್ಯಬಹುದು ಎನ್ನುವುದನ್ನು ಕಾಲವೇ ನಿರ್ಧರಿಸಬೇಕಾಗುತ್ತದೆ. ದಶದಿಕ್ಕುಗಳತ್ತ ಪ್ರಯಾಣ ಹೊರಟಿರುವ ಈ

ಕವಿಯ ಪ್ರಯಾಣದ ಹಾದಿ ಕಷ್ಟಕರವಾಗಿದ್ದು ಇದನ್ನು ಹೇಗೆ ನಿರ್ವಹಿಸುತ್ತಾರೆ ಎಂಬುದು ಕುತೂಹಲವಾಗಿ ಉಳಿಯುತ್ತದೆ.

ನವ್ಯ, ದಲಿತ, ಬಂಡಾಯ, ನವ್ಯೋತ್ತರ ಕಾವ್ಯ ಕಾಲಘಟ್ಟಗಳ ಸಹ ಪ್ರಯಾಣಿಕರಾಗಿರುವ **ಆನಂದಝುಂಜರವಾಡ** ಈವರೆಗೂ 'ಪದಗಳ ಪರಿಧಿಯಲಿ', 'ಖಿನನೋದ್ಯಮ', 'ಎಲ್ಲಿದ್ದಾನೆ ಮನುಷ್ಯ', 'ಶಬ್ದ ಪ್ರಸಂಗ', 'ದಿಂಡಿ ಮತ್ತು ದಾಂಡಿ', 'ಗಂಡಭೇರುಂಡ' ಸಂಕಲನಗಳಲ್ಲಿ ತಮ್ಮ ಕಾವ್ಯದ ಹಾದಿಯನ್ನು ಬೆಳೆಸುತ್ತಾ ಬಂದಿರುವ ಹಿರಿಯ ಕವಿ.

ಕವಿಯ ಬದುಕನ್ನೆಲ್ಲ ಅಪಹಾಸ್ಯ ಮಾಡದಿರಿ
ಕವನವೆಂದು ಕರೆದು
ತನ್ನ ಕಳಕೊಂಡಿರುವ ಈ ಒಂಟಿ ಜೀವಕ್ಕೆ
ಬೇರೆ ಯಾರಿದ್ದಾರೆ ನಿಮ್ಮ ಹೊರತು?

(ಬಿನ್ನಹ)

ಮಾತು ಸಾಕು, ಎನ್ನುವಂಥ ಮಾತಿಗೂ ಮಾತ ಬಳಸಬೇಕು
ಮಾತಿನಿಂದಲೇ ಮಾತ ನಿಂದಿಸುತ, ಮಾತಿನ ಮಾತೃತ್ವ ಹೊಳೆಸಬೇಕು.

(ಮಾತು)

ಕಾವ್ಯ ಅಂದ್ರ
ಕವಿಯ ಮನಿ-
ಯ ಮೇಜವಾನೀ
ನಮ್ಮ ಮುಂದ ಎಷ್ಟ ಥಂದ ಬಡಸಿಟ್ಟಾನ, ಸಾವಿರದ ಪಡಿ-ಪದಾರ್ಥ್ಯಾನ?
ಎಷ್ಟ ಥರದಿಂದ ಬಡಿಸಿಟ್ಟಾನ, ಸಾಹಿತ್ಯದೊಳಗ ಅಡಗಿಸಿರೋ ಅರ್ಥಾನ?
ಏನ್ಯೇನ ಹಾಕ್ಯಾನೋ? ಎಷ್ಟ ಹಾಕ್ಯಾನೋ?
ಒಣಗಸೋದು, ನೆನಸೋದು, ಬೇಯ್ಸೋದು, ಕರಿಯೋದು,
ಒಂದೊಂದಕ್ಕ ಒಂದೊಂದ ಥರದ ನೀರು-ಉರಿ.
ಖಮ್ಮನ ವಾಸನೀ ಮನೀ ಎಲ್ಲಾ ತುಂಬೇದ
ಯಾರ ಬಂದ್ರೂ ಕರೀತ್ಯದ 'ಒಳಗ ಬರ್ರಿ'.

(ಕಾವ್ಯ ಅಂದ್ರ...)

ಹೀಗೆ ಕಾವ್ಯ ನಿರಂಕುಶದ ಬಗೆಗೆ ವ್ಯಾಖ್ಯಾನ ಮಾಡುವ ಕವಿ, ಎದುರು ನಿಂತು ವ್ಯಕ್ತಿಯೊಂದಿಗೆ ಆಡುತ್ತಿರುವ ಮಾತಿನಂತೆ ಕಾವ್ಯ ಕಟ್ಟಬಲ್ಲರು. ಇಂತಹ 'ಮಾತುಕವಿತೆ' ಅನಂದಝುಂಜರವಾಡರ ಕಾವ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದಾಗಿದೆ.

ಒಂದು ಮರ
ನನ್ನ ತೊಟ್ಟಿಲಾಗಿತ್ತು
ಅದಕ್ಕೆ ಯಾರು ನೀರುಣಿಸಿ ಬೆಳಸಿದ್ದರೋ ಗೊತ್ತಿಲ್ಲ
ಒಂದು ಮರ
ನನ್ನ ಚಿತೆಗೆ ಒದಗಲು ಎಲ್ಲೋ ಬೆಳೆಯುತ್ತಿದೆ
ಅದಕ್ಕೆ ಯಾರು ನೀರುಣಿಸುತ್ತಿದ್ದಾರೋ ಗೊತ್ತಿಲ್ಲ
ಎಲ್ಲರಂತೆ
ನಾನೂ ಕೆಲ ಮರಗಳಿಗೆ ನೀರೆರೆದು ಬೆಳೆಸುತ್ತಿದ್ದೇನೆ
ಅವು
ಯಾರಿಗೆ ಯಾವುದಕ್ಕೆ
ಒದಗುತ್ತದೋ ನನಗೆ ಗೊತ್ತಿಲ್ಲ

(ಮರ)

ಬದುಕಿನ ತಾತ್ವಿಕತೆಯೊಂದಿಗೆ ಮುಖಾಮುಖಿಯಾಗಿ ನಿಲ್ಲುವ ಝುಂಜರವಾಡರ ಕಾವ್ಯ ಮನುಷ್ಯನ ಅಸ್ತಿತ್ವದ ಸಾರ್ಥಕ್ಯವನ್ನು ಹೀಗೆ ಕಂಡುಕೊಂಡಿದೆ.

ಕತ್ತರಿಸಿದಿ– ಹಚ್ಚಿದಿ–ಹಾರೀಬಿಟ್ಟೀ ಎಲ್ಲಾ ಬರೋಬರಿ
ಗಾಳೀಪಟಾ ಎಷ್ಟ ಛೆಂದ ಇದ್ರೂ
ಗಾಳೇನ ನಿಮ್ಮಪ್ಪನ ಮನೀದ?
ನಿಮ್ಮ ಧಾರದ ಉಂಡಿ ದೊಡ್ಡದದ ಖರೇ,
ಬರೇ ಬಿಟ್ಟರ ತೊಡಕತದ
ಗಾಳಿ ಎಳೀಬೇಕು– ಪಟಾ ಏರಬೇಕು
ತನ್ನ ತೊಡಕು ತಾನೇ ಬಿಡಿಸಿಗೋತ ಧಾರದ ಭಾರ ಕರಗಬೇಕು
ಮಂದಿ ಬಾಲಾಗಸಿ ತಂದು ನಿನ್ನ, ಪಟ್ಟಕ್ಕ ಕಟ್ಟಬ್ಯಾಡಾ
ನಾನ್ಸ ಪಟಾ ಮಾಡೇನಿ ಅಂದ್ರೂ
ನನ್ನ ಕಡ್ಡೀ – ನನ್ನ ಕಾಗದಾ– ನನ್ನ ಅಂಟು– ನನ್ ಧಾರಾ
ಯಾವ ಯಾವದೋ ಪ್ಯಾಟಿಯಿಂದ ಬಂದೀರ್ತಾವ್ಸ

(ಗಾಳೀಪಟಾ್ಸ)

ಪರತಂತ್ರ, ಅವಲಂಬನ ಬದುಕನ್ನು ಒಪ್ಪಿಕೊಳ್ಳದ, ನೆರಳಲ್ಲಿ ಕರಗಿ ಹೋಗದ ನಿಸರ್ಗ ನಿಯಮದೊಂದಿಗೆ ಸ್ವ-ಸೃಜನಶೀಲತೆಯ ಧಾತುವಿನಲ್ಲಿ ನಂಬಿಕೆ ಕವಿಯದು. ಗಾಳಿಪಟದ ಮೂಲಕ ಬದುಕಿನ ತನ್ನ ಸೂತ್ರವನ್ನು ತೋರುತ್ತಾರೆ. ಬದುಕುವುದಕ್ಕೂ ಒಂದು ಸೂತ್ರವಿದೆ ಎಂದು ನೆನಪಿಸುತ್ತಾರೆ.

ಅಗ್ನಿಸಾಕ್ಷಿಯಲಂದು ಭಾಗಿಯಾದದ್ದು ನಿಜ
ಎಷ್ಟು ಬಿಗಿಯಾಗಿತ್ತು ಜೀರಿಗೆಯ ಗಂಟು
ಸಪ್ತಪದಿ ಹೆಜ್ಜೆಯಲಿ, ಹೋಮಧೂಮದ ನಡುವೆ
ಅರುಂಧತಿಯ ಕಾಣಿಸಿತೆ ನಮ್ಮ ನಂಟು?

ಮೈಮುಟ್ಟಿ ತಿಳಿದೆವು ಮನ ಮುಟ್ಟಿದೆವು ಎಂದು
ಸವಿದ ತುಟಿಮುದ್ದುಗಳ ಪ್ರೀತಿ ಎಂದು
ಆ ಮತ್ತು, ಆ ಉಲುಹು, ಆ ಉಸಿರು, ಆ ಬಸಿರು,
ತಿರುಗಣಿಯ ತಿರುಗ ತೊಟ್ಟಿಲ ಜೀಕವೆಂದು

(ಇಷ್ಟು ದಿನ ಸಂಸಾರ)

ಬದುಕಿನ ನಿರಂತರ ಶೋಧದಲ್ಲಿ ಹೆಜ್ಜೆ ಹೆಜ್ಜೆಗೂ ಕವಿ ಕೇಳಿಕೊಳ್ಳುತ್ತಿರುವ ಪ್ರಶ್ನೆ ಎಂದರೆ ಬದುಕಿನ ಅಂಚನ್ನು, ಅದರ ನಿಜವನ್ನು ಕಾಣಲಾದೀತೆ? ಕಂಡೆವೆ? ಎಂಬುದೇ ಆಗಿದೆ. ಅತ್ಯಂತ ಉತ್ಕಟವಾಗಿ ಬದುಕನ್ನು- ಕಾವ್ಯವನ್ನು ಅನುಭವಿಸುತ್ತಾ ಬಂದಿರುವ ಕವಿ ಜೀವ ಪ್ರಯಾಣದಲ್ಲಿ ಭೂತ-ವರ್ತಮಾನ ಎರಡರ ಸಂಘರ್ಷವು ಸೇರಿದಂತೆ ಭವಿಷ್ಯದ ಬಗೆಗಿನ ಪ್ರಶ್ನೆಯನ್ನು ಎತ್ತಿಕೊಳ್ಳುತ್ತಾರೆ.

ಕಂಬಾಲಪಲ್ಲಿ- ಕಾಶ್ಮೀರಗಳ
ಶುಭ್ರ- ಬೆಡ್‌ಶೀಟುಗಳನ್ನು
ಒಂದು ರಕ್ತದ ಕಲೆಯೂ ಕಠಿಣದಂತೆ ತಕ್ಷಣ
ತೊಳೆಯಬೇಕಾಗಿರೋದರಿಂದ
ಪಾರಿವಾಳದ ರೆಕ್ಕೆಗಳನ್ನೂ ಒಳಗೊಂಡಂತೆ,
ಈ ದೇಶದ ಎಲ್ಲ 'ಬಿಳಿ'ಯನ್ನೂ
ಅಲ್ಲಿ ಬಳಸಲಾಗುತ್ತಿದೆ.

(ಕ್ಲಿಂಟನ್ ಹೋಳಿ ಆಡುತ್ತಾರೆ)

ಅಮೇರಿಕಾವನ್ನು ಉದ್ದೇಶಿಸುತ್ತಾ ಅಲ್ಲಿನ ಕ್ರೌರ್ಯವನ್ನು ತಣ್ಣಗೆ ಹೇಳಿ ಗೇಲಿ ಮಾಡುತ್ತಿರುವವರಾದರೂ ಅದೇ ಸಮಕಾಲೀನ ವಿಮರ್ಶೆಯೂ ಆಗಿಬಿಡುತ್ತದೆ. ಜಾತಿಕಾರಣವಾಗಿ, ಗಡಿಗಳ ಕಾರಣವಾಗಿ ಈ ನೆಲವನ್ನು ಕೆಂಪು ಮಾಡುತ್ತಿರುವವರ

ಬಗೆಗೆ ಕವಿಗೆ ನೋವಿದೆ. ಝುಂಜರವಾಡರ ಕಾವ್ಯದಲ್ಲಿ ಮುಖ್ಯವಾಗಿ ಕಾಣುವ ವ್ಯಂಗ್ಯ, ವಿಡಂಬನೆ, ರಾಜಕೀಯ ಮೌಲ್ಯದ ಪ್ರಶ್ನೆಯೊಂದಿಗೆ ಸಿದ್ಧಾಂತಗಳ ಸಂದೇಹಿಸುವುದು ನಮ್ಮ ಕಾಲದಲ್ಲಿ ನಾವು ನಿಜವೆಂದು ನಂಬಿರುವುದರ ಕುರಿತು ಮರು ವಿಮರ್ಶೆಗೆ ಒಳಪಡಿಸುತ್ತದೆ. ಅದಕ್ಕಾಗಿ ಈ ಕವಿ ವೈದಿಕ, ಲೈಂಗಿಕ, ಸಂಗೀತ, ಸಂಕೇತ ಪ್ರತಿಮೆಗಳನ್ನು ಯಥೇಚ್ಛವಾಗಿ ಬಳಸಿಕೊಳ್ಳುತ್ತಾರೆ.

'ನಾನು ಬರುತ್ತೇನೆ ಕೇಳು', 'ಚಂದ್ರನನ್ನು ಕರೆಯಿರಿ ಭೂಮಿಗೆ', 'ಹೊಳೆಮಗಳು', 'ಜಾತ್ರೆಯಲ್ಲಿ ಶಿವ', 'ದರುಶನ' ಸಂಕಲನಗಳನ್ನು ಪ್ರಕಟಿಸಿರುವ **ಸವಿತಾನಾಗಭೂಷಣ** ಸದ್ಯದ ಕನ್ನಡಕಾವ್ಯ ಸಂದರ್ಭದಲ್ಲಿ ವಿಶಿಷ್ಟವಾದ ಧ್ವನಿ. ಹೆಣ್ಣು ಮತ್ತು ಕಾಲ ಕೇಂದ್ರಿತವಾಗಿ ತಮ್ಮ ಕಾವ್ಯದ ಹಾದಿಯನ್ನು ತುಳಿಯುತ್ತಿರುವ ಸವಿತಾರವರ ಕಾವ್ಯದಲ್ಲಿ ಒಂದು ಸಹಜ ವರ್ಗಪ್ರಜ್ಞೆಯೂ ಕ್ರಿಯಾಶೀಲವಾಗಿರುವುದು ಕಂಡು ಬರುತ್ತದೆ. ಕುವೆಂಪು ಗ್ರಹಿಸಿದ 'ಪ್ರಕೃತಿ' ಆಧುನಿಕ ಯುಗದ ರೂಪಕವಾಗಿ ಕೆಲಸ ಮಾಡಿದಂತೆ ಸವಿತಾರವರ ಕಾವ್ಯ ಸದ್ಯ ಕಾಣಿಸುತ್ತಿದೆ. ಹುಟ್ಟಿನೊಡನೆ ಬೆರೆತಿರುವ ಪ್ರಕೃತಿ ದುಡಿಮೆಯಿಂದ ಸಿದ್ಧವಾಗಿರುವ ಸಂಸ್ಕೃತಿ ಈ ಎರಡೂ ಇವರ ಕಾವ್ಯದ ಪ್ರಧಾನ ಅಂಶ.

ಚುಕ್ಕಿಯಾಗಿಸು ಎಂದು
ನಾನು ಬೇಡುವುದಿಲ್ಲ
ಹಕ್ಕಿಯಾಗಿಸು ನನ್ನ
ಹಾರಿಕೊಂಡಿರುವೆ
ನೀಲ ಗಗನದೊಳಗೆ (ನಮನ)

ಸ್ವಾತಂತ್ರ್ಯದ ಅಪೇಕ್ಷೆಯನ್ನು ಸಹಜ ಕುತೂಹಲಗಳಲ್ಲಿ ಹೊರ ಹಾಕಿರುವ ಈ ಕವಿ ಕ್ರಮೇಣ ತುಳಿದಿರುವ ಹಾದಿ ಆಶ್ಚರ್ಯ ಉಂಟುಮಾಡುತ್ತದೆ.

ಗಾಂಧಿ ಹುಟ್ಟಿದ್ದು
ನೆಟಾಲಿನ ರಾಜಧಾನಿಯಾದ
ಮೆರಿಟ್ಸ್ ಬರ್ಗ್‌ನಲ್ಲಿ
ರೈಲ್ವೆ ಪ್ಲಾಟ್ ಫಾರಂನಲ್ಲಿ
ಚೆಲ್ಲಾಪಿಲ್ಲಿಯಾದ
ಹಾಸಿಗೆ, ಪೆಟ್ಟಿಗೆ, ಕಾಗದಗಳ ನಡುವೆ (ಗಾಂಧಿ ಹುಟ್ಟಿದ್ದು)

ಗಾಂಧೀಜಿ ಅಕ್ಟೋಬರ್ ಎರಡರಂದು ಗುಜರಾತಿನ ಪೋರಬಂದರಿನಲ್ಲಿ ಕರಮಚಂದ್‌ಗಾಂಧಿ, ಪುತಲೀಬಾಯಿಯ ಮಗನಾಗಿ ಹುಟ್ಟಿದರು ಎಂದು ಕಂಠಪಾಠ

ಮಾಡಿರುವ ನಮಗೆ ಗಾಂಧಿಯೊಳಗಿನ ಗಾಂಧಿ ಹುಟ್ಟಿದ್ದು ದಕ್ಷಿಣ ಆಫ್ರೀಕಾದಲ್ಲಿ ಆದ ಅವಮಾನದ ಕ್ಷಣದಲ್ಲಿ ಎಂದು ಕಾಣಿಸುವ ದರ್ಶನ ಇಲ್ಲಿದೆ.

ಸವಿತಾ ನಾಗಭೂಷಣರ ಕವಿತೆಗಳು ಸೀಮಿತವಾದ ಸ್ತ್ರೀವಾದದ ಚೌಕಟ್ಟಿನಲ್ಲಿಟ್ಟು ನೋಡುವುದರಾಚೆಗಿವೆ. ಬದುಕನ್ನು ತೀವ್ರವಾಗಿ ಅನುಭವಿಸಿ ಅದಕ್ಕೆ ಆಕಾರಕೊಟ್ಟಂತೆ ಬದುಕಿನ ನಿಜವೇ ಕಾವ್ಯದಲ್ಲಿ ಎರಕಗೊಂಡಂತೆ ಕಾಣಿಸುತ್ತದೆ.

ಬಲೆಯೊಳಗಿದ್ದರೂ ದುಃಖ ಬಯಲೊಳಗಿದ್ದರೂ ದುಃಖ
ಬಿಸೋ ಕಲ್ಲಿನ ನಡುವೆ ಬದುಕು ಕಾಣಕ್ಕ.. (ದುಃಖ)

ತುತ್ತಿನ ಮುಂದೆ ತಲೆಬಾಗಲು ಕಲಿಸು
ತಂಬೂರಿಯ ಕೈಗಿತ್ತು ತಲ್ಲಣವ ನಿಲಿಸು
ತುತ್ತು-ತುತ್ತೂರಿಯ ನಡುವೆ
ಸೇತುವೆಯಂತೆ ನಿಲಿಸು (ತುತ್ತು ಮತ್ತು ತುತ್ತೂರಿ)

ಸಾವಿನಂತೆ ಎಲ್ಲರಲ್ಲಿಯೂ ಉಳಿದಕೊಳ್ಳುವ ದುಃಖ; ಅದರ ಅನಂತತೆಯನ್ನು ಒಪ್ಪಿಕೊಳ್ಳುತ್ತಲೇ ಪರಸ್ಪರ ಸೇತುವೆಯ ಜೀವನಕ್ರಮವನ್ನು ನಂಬುತ್ತದೆ. ಕಡ್ಡಿ ಎರಡು ತುಂಡಾಗುವಂತೆ ಮಾತಾನಾಡುವ, ಬರೆಯುವವರ ನಡುವೆ 'ಸೇತುವೆ' ಆಗಲು ಹವಣಿಸುವ ಕವಿಯ ಅಂತರಂಗ ದೊಡ್ಡದಿದೆ. ಇದಕ್ಕೆ ಸವಿತಾರವರ ಹಲವು ಕವಿತೆಗಳನ್ನು ಉದಾಹರಿಸಬಹುದು. ಇಲ್ಲಿ ಮುಖ್ಯವಾಗಿ 'ದಾಸವಾಳ ಮತ್ತು ಹುಡುಗಿ' ಕವಿತೆಯನ್ನು ಗಮನಿಸಬಹುದು.

ಟೀಚರ್.......
ಅವತ್ತು ನಾನು ತಂದು
ಕೊಟ್ಟ ಹೂವನ್ನು
ನೀವು ಮುಡಿಯಲಿಲ್ಲ
. . . . . . . . . . . .
ಮರುದಿನ ನೀವೆ ಬೋರ್ಡಿನ
ಮೇಲೆ ಕೆಂಪು ದಾಸವಾಳ ಬರೆದಿರಿ
ಆ ಮೇಲೆ ಗಂಟೆಗಟ್ಟಳೆ ಕೊರೆದಿರಿ
ನನ್ನ ಕಣ್ಣಿಂದ ಅಷ್ಟೂ
ದಳಗಳುರುಳಿದವು
ನಿಮಗೆ ಕಾಣಲಿಲ್ಲ

. . . . . . . . . . . .

ನಾನು ನೋಡಿದ್ದೇನೆ
ನನ್ನ ಗೆಳತಿಯರು ತರುವ
ಗುಲಾಬಿಯನ್ನು ನಿಮ್ಮ ಮುಡಿಯಲ್ಲಿ
ಆದರೆ ಗಟ್ಟಿಮಣ್ಣಿನ
ನನ್ನ ಮನೆಯಂಗಳದಲ್ಲಿ
ಗುಲಾಬಿ ಚಿಗುರುವುದಿಲ್ಲ (ದಾಸವಾಳ ಮತ್ತು ಹುಡುಗಿ)

ಈ ಕವಿತೆ ಮೇಲ್ನೋಟಕ್ಕೆ ಒಬ್ಬ ವಿದ್ಯಾರ್ಥಿಯ ನೋವನ್ನು ಹೇಳುತ್ತದೆ ಅನ್ನಿಸಿದರೂ, ವಿದ್ಯಾರ್ಥಿ ಮತ್ತು ಟೀಚರ್ ನಡುವೆ ಇರುವ ಅಗಾಧ ಕಂದಕದ ಚಿತ್ರವನ್ನು ಈ ಕವಿತೆ ಧ್ವನಿಸುತ್ತದೆ. ಭಾವನೆಗಳು ಅಮುಖ್ಯವೆನಿಸುವಂತೆ ವರ್ತಿಸಿ ಬಿಡುವ ಇಲ್ಲಿನ ಟೀಚರ್ ಯಾಂತ್ರಿಕವಾದ ಒಂದು ಬೊಂಬೆಯಂತೆ ಅನುಭವಕ್ಕೆ ಬರುತ್ತದೆ. ನಮ್ಮ ಹಳ್ಳಿಗಳು ಅಲ್ಲಿನ ಮಕ್ಕಳು ನೆನಪಾಗುವಂತೆ ಮಾಡುತ್ತದೆ. ಮುಖ್ಯವಾಗಿ ಶಿಕ್ಷಣದ ಒಳಗಿನ ಬಿಕ್ಕಟ್ಟಿನ ರೇಕುಗಳನ್ನು ನಾವಿಲ್ಲಿ ಕಾಣಬಹುದು. ಹಾಗಾಗಿ ಇಲ್ಲಿಯ ವಿದ್ಯಾರ್ಥಿ ಅಸಂಖ್ಯ ವಿದ್ಯಾರ್ಥಿಗಳ ಪ್ರತಿನಿಧಿಯಾಗಿ ಕಾಣುತ್ತಾಳೆ. ಸವಿತಾರವರ 'ಜಾತ್ರೆಯಲ್ಲಿ ಶಿವ' ಹಲವು ಕಾರಣಗಳಿಗೆ ಮುಖ್ಯವೆನಿಸುವ ಕವಿತೆ. ಹೆಣ್ಣಿನ ಸಹಜ ಕನವರಿಕೆ, ಕನಸುಗಳ ಸುತ್ತ ದಿಟ್ಟವಾಗಿ ಮಾತನಾಡುತ್ತಿದ್ದ ಈ ಕವಿಯ ಕಾವ್ಯ ವಿಸ್ತೀರ್ಣವನ್ನು ಜಾತ್ರೆಯಲ್ಲಿ ಶಿವ ಕವಿತೆಯಲ್ಲಿ ಕಾಣಬಹುದು.

ಸವಿತಾನಾಗಭೂಷಣರ ಹಿಂದಿನ ಕವಿತೆಗಳಂತೆ ಓದುಗನನ್ನು ಕೈ ಹಿಡಿದು ಕರೆದುಕೊಂಡು ಹೋಗುವ ಗುಣವನ್ನು ಇಲ್ಲಿಯೂ ಕಾಣುತ್ತೇವೆ. ಕನ್ನಡ ಕಾವ್ಯದೊಳಗೆ ಆಧ್ಯಾತ್ಮ, ಅನುಭಾವದ ಮಾತು ಹೆಚ್ಚು ಹೆಚ್ಚು ಕೇಳಿ ಬರುತ್ತಿರುವ ಸಂದರ್ಭದಲ್ಲಿ ಈ ಕವಿತೆ ಲೌಕಿಕವಾಗಿಯೇ ನಾವು ಕಂಡುಕೊಳ್ಳಬೇಕಾದ ನಿಜದ ನೆಲೆಯನ್ನೇ ಮುಟ್ಟಿ ಮಾತನಾಡಿಸಿದಂತಿದೆ. ಶಿವನ ಪಾತ್ರಧಾರಿಯ ಒದ್ದಾಟ, ಅವನ ದೈನ್ಯತೆ ಕವಿಯ ಮುಖಾಮುಖಿ ಸಮಕಾಲೀನ ಕನ್ನಡ ಕಾವ್ಯ ಎದುರುಗೊಳ್ಳಬೇಕಾದ ತುರ್ತನ್ನೇ ನಿರ್ದೇಶಿಸುತ್ತಿದೆ. ಓದುಗನಲ್ಲಿ 'ಕರುಣೆ'ಯನ್ನು ಹುಟ್ಟಿಸುವ ಈ ಕವಿತೆ ಉದ್ದಕ್ಕೂ ಕುರುಹು ರೀತಿಗಳ ಚಹರೆಯನ್ನು ಅರಿಯುವಂಥದ್ದು. ಇಲ್ಲಿ ಅರ್ಥಕ್ಕಿಂತ ಅರ್ಥದ ಸಂಬಂಧಗಳು ಸಿಗುತ್ತಾ ಹೋಗುತ್ತದೆ. ಜಾತ್ರೆಯೇ ಒಂದು ಆಡಂಬೊಲವಾಗಿ ಸ್ವಾತಂತ್ರ್ಯದ ಭೂಮಿಕೆಯಾಗಿ, ಪ್ರತಿಭಟನೆಯ ನೆಲೆಯೂ ಆಗಿತೋರುತ್ತದೆ.

ಗಣಪ ಹಸಿದಿದ್ದಾನೆ
ಗಿರಿಜೆಗೆ ಕಾಯಿಲೆ....

ಹೆಂಡತಿ – ಮಕ್ಕಳಿಗಾಗಿ
ಶಿವನಲ್ಲದೆ ಭವಿ ಅಳುವನೆ?! (ಜಾತ್ರೆಯಲ್ಲಿ ಶಿವ)

ಈ ಪ್ರಶ್ನೆ ಓದುಗನೊಳಗೇ ಹುಟ್ಟುವಂತೆ ಈ ಕವಿತೆಯ ನಡಿಗೆ ಇದೆ. ಇಲ್ಲಿನ ಜಾತ್ರೆಯ ಪರಿಕಲ್ಪನೆ ಅದಮ್ಯವಾದ ಸ್ವಾತಂತ್ರ್ಯದ ಅಖಾಡವೆ ಆಗಿದೆ. ಇಲ್ಲಿ ಕವಿಮನ ಸ್ತ್ರೀ ಸ್ವಾತಂತ್ರ್ಯದ ಪ್ರಶ್ನೆಯ ಜೊತೆಗೆ ಸಾಮಾಜಿಕತೆಯ ಕಡೆಗೆ ಹೊರಳುತ್ತಿರುವ ಸೂಚನೆ ಇದೆ.

ಅವರು ತ್ರಿಶೂಲಗಳನ್ನು ಹಿಡಿದಿದ್ದಾರೆ
ಇವರು ತಲವಾರಗಳನ್ನು ಹಿಡಿದಿದ್ದಾರೆ
ಕಿಚ್ಚು ಹಾಯಿಸುವ ಹಬ್ಬದಲಿ
ಇಬ್ಬರೂ ಹುರುಪಿನಲಿ ಪಾಲ್ಗೊಂಡಿದ್ದಾರೆ!
'ಅಲ್ಲಾ' ಎಂದರೆ ನೇರ ಸ್ವರ್ಗಕ್ಕೆ ಅಟ್ಟುತ್ತಾರೆ
'ರಾಮ' ಎಂದರೆ ಇಲ್ಲೇ ನರಕದಲ್ಲಿ ಉಳಿಸುತ್ತಾರೆ!
(ಕವಿಯ ಮಾತನ್ನು ಯಾರು ಕೇಳುತ್ತಾರೆ)

ಒಂದು ಸಂದಿಗ್ಧತೆಯ ನಡುವೆ ಕವಿಯೂ ನಿಂತಿರುವ ಚಿತ್ರ ಇಲ್ಲಿದೆ. ಆದರೂ ಕವಿ ಹೇಳುವುದೇನೆಂದರೆ,

ನನ್ನ ತಾಯಿ ಪರಾಶಕ್ತಿ
ನನ್ನ ತಂದೆ ಅಲ್ಲಾಹು
ಏನು ಬೇಕಾದರೂ ತಿಳಿದುಕೊಳ್ಳಿ
ನಾನು ಹಿಂದು
ನಾನು ಮುಸ್ಲಿಂ
ಹೇಗೇ ಬೇಕಾದರೂ ಕರೆದುಕೊಳ್ಳಿ

ಇದು ಕವಿಯ ವ್ಯಕ್ತಿತ್ವವನ್ನೂ, ಧಾರ್ಮಿಕ ಸಹಚರ್ಯದ ತಾತ್ವಿಕತೆಯನ್ನು ಸ್ಪಷ್ಟಪಡಿಸುತ್ತದೆ. ಇದಕ್ಕೆ ಮುಂದುವರಿಕೆಯಾಗಿ ಕವಿ ಹೇಳುವುದಕ್ಕೆ ಚಾರಿತ್ರಿಕವಾದ ಮಹತ್ವ ಬರುತ್ತದೆ.

ಕಚ್ಚಿ ರುಚಿ ನೋಡಿದ
ಹಣ್ಣಿಗೆ ತುಟಿ ಹಚ್ಚಿದನಲ್ಲ
ಆ ರಾಮ
ನನಗೆ ಪ್ರಿಯನಾಗಲಿ (ರಾಮ–ಕೃಷ್ಣ–ಶಿವ)

ಈ ಕವಿತೆ ಇಪ್ಪತ್ತೊಂದನೇ ಶತಮಾನದ ಮುಖ್ಯ ನೆಲೆಯನ್ನು ಅಲ್ಲಾಡಿಸುತ್ತಿದೆ. 'ರಾಮ' ಇಂದಿನ ರಾಜಕೀಯದ ಕರಪತ್ರವಾಗಿ ವರ್ತಮಾನದ ಎಲ್ಲಾ ಸಂದಿಗ್ಧತೆಗಳಿಗೆ ರೂಪಕವಾಗುತ್ತಿರುವ ಸಂದರ್ಭದಲ್ಲಿ ಕವಿ 'ಆ ರಾಮ' ಎಂದು ಹೇಳುತ್ತಿರುವುದು ಮುಖ್ಯ ಅಂಶವಾಗಿದೆ. ಸದ್ಯದ ಎದುರಿಗಿರುವ ರಾಮನಿಗೆ ರಕ್ತ, ಧರ್ಮದ ಸೋಂಕು ತಗುಲಿಕೊಂಡಿರುವುದು ಕವಿಗೆ ಅರಿವಿದೆ. ಹಾಗಾಗಿ 'ಆ ರಾಮ' ನಮ್ಮ ಅರಿವಿನ ಪ್ರಯಾಣದ ಜೊತೆಗಾರನಾಗಲಿ ಎಂಬ ಆಸೆ. ಕುವೆಂಪು, ಗೋಪಾಲಕೃಷ್ಣಅಡಿಗ, ಎಚ್.ಎಸ್.ವೆಂಕಟೇಶ್‌ಮೂರ್ತಿ ಮೊದಲಾಗಿ ಎಲ್ಲರೂ ರಾಮನನ್ನು ಪುನರ್ ಮೌಲ್ಯಿಕರಣಕ್ಕೆ ಒಳಪಡಿಸಿದ್ದು, ಸವಿತಾರವರ ರಾಮ ಸಹಜವಾದ ಮನುಷ್ಯತ್ವದ ಹುಡುಕಾಟವಾಗಿದೆ.

ಬಂಡಾಯದಲ್ಲಿಯೂ, ಬಂಡಾಯೋತ್ತರದಲ್ಲಿಯೂ ಭಿನ್ನರಾಗಿ ಕಾಣುವ ಕವಿ **ಬಂಜಗೆರೆ ಜಯಪ್ರಕಾಶ್**. ಇವರ ಕವಿತೆಗಳ ಬಗೆಗೆ ಕನ್ನಡ ವಿಮರ್ಶೆ ಅಷ್ಟಾಗಿ ಗಮನಕೊಟ್ಟಂತೆ ಕಾಣುವುದಿಲ್ಲ. ಆದರೆ ಈ ಹೊಸ ಶತಮಾನದ ಮಧ್ಯ ಭಾಗದಲ್ಲಿ ಬಂದಿರುವ 'ಕಳೆದ ಕಾಲದ ಪ್ರೇಯಸಿಯರಿಗೆ' ಈ ತನಕದ ಕವಿತೆಗಳು ಹೆಚ್ಚು ಪ್ರಸ್ತುತವೆನಿಸುತ್ತದೆ. ಕನ್ನಡ ಕಾವ್ಯ ಸಂದರ್ಭದಲ್ಲಿ ಕಾಲ ಕಾಲಕ್ಕೆ ಬದಲಾದ ತಾತ್ವಿಕ ನಿಲುವುಗಳನ್ನು ಕಾವ್ಯದ ಅಧ್ಯಯನದ ಮೂಲಕವೇ ಗ್ರಹಿಸಬಹುದಾಗಿದೆ. ಜಯಪ್ರಕಾಶರ ಅನೇಕ ಕವಿತೆಗಳು ತಮ್ಮ ಕವಿತೆಯ ದಿಕ್ಕು, ಹುಡುಕಾಟ, ಆಶಯವನ್ನು ಹೀಗೆ ಪ್ರಕಟಿಸುತ್ತದೆ.

ಕ್ಷಮಿಸು
ಕವನವಾಗಬೇಕೆಂಬ ನನ್ನ ಗೆಳತಿ
ಚಂದ್ರಮುಖಿಯೆನ್ನಲಾರೆ ನಿನ್ನ
ಹೂ ಲತೆ ತಾರೆ ಕೂಡ?
ಕವಿ ಸಮಯಗಳ ಗರ್ಭಪಾತವಾಗಿದೆ. (ಹೀಗೊಂದು ಪ್ರಸಂಗ)

ಈ ಸಾಲುಗಳನ್ನು ಓದುತ್ತಿದ್ದಂತೆ ಕವಿ ಸಮಯದ ಕವಿಗಳು 'ಚಂದ್ರಮಂಚಕೆ ಬಾ ಚಕೋರಿ' ಎಂಬಂತೆ ಈ ಕವಿ ಹೇಳಲಾರ. ಸಿದ್ದ ಮಾದರಿಯ ಶಾಸ್ತ್ರೀಯ ಚೌಕಟ್ಟಿನ ಕಾವ್ಯ ಜಾಡನ್ನು ಬಿಟ್ಟು ನಡೆದ ಬಂಡಾಯ ಸಾಹಿತ್ಯ ಚಳುವಳಿಯ ನಡುವೆಯೇ ಹೂವು-ತಾರೆಗಳ ಬಗೆಗೆ ಬರೆಯಬೇಕೇ? ಬೇಡವೇ? ಎಂಬ ವಾಗ್ವಾದಗಳು ಕಾವ್ಯದ ಮೂಲಕ ನಡೆಯುತ್ತಿರುವಾಗ 'ಹೂವಿನ ಬಗ್ಗೆ ಹೆಣ್ಣಿನ ಬಗ್ಗೆ ತಾರೆಯರ ಬಗ್ಗೆ ಹಾಡುವುದು ಬೇಡ, ಹಾಗೆಂದು ಬರೆಯುವುದು ಬೇಡ' ಎಂಬ ಮಾತುಗಳು ಹರಿದಾಡುತ್ತಿತ್ತು. ಇದಕ್ಕೆ ಭಿನ್ನವಾಗಿ ಮನುಷ್ಯ ಮತ್ತು ಅವನ ಬದುಕಿಗೆ ನ್ಯಾಯ

ಒದಗಿಸುವ ನಿಟ್ಟಿನಲ್ಲಿ 'ಕವಿ ಸಮಯ ಗರ್ಭಪಾತವಾಗಿದೆ' ಎನ್ನುವುದು ಈ ಕವಿಯ ಕಾವ್ಯದ ಹಾದಿಯ ಮೇಲೆ ಬೆಳಕು ಚೆಲ್ಲುತ್ತದೆ.

ಬೂಟು ಕಾಲೊದೆತಕ್ಕೆ
ಚಲ್ಲಾಪಿಲ್ಲಿ ಬಿದ್ದ ಅನ್ನದ
ಅಗುಳಿನಂತೆ ನಕ್ಷತ್ರ
ಹೀಗೆ ಮನಸು
ಕರ್ಫ್ಯೂ ವಿಧಿಸಿದ ಬೀದಿ
ಬದುಕು
ಗಾಳಿಗೆ ಒಡ್ಡಿದ ಬೂದಿ (ಪ್ರಾರ್ಥನೆ)

ಈ ಪ್ರಾರ್ಥನೆ ಈ ಕವಿಯ ಕಾವ್ಯದ ನೆಲೆಯನ್ನು ತಿಳಿಸುತ್ತದೆ. ಅಡಿಗರ ಪ್ರಾಥಿನಿಧಿಕ 'ಪ್ರಾರ್ಥನೆ' ಕವಿತೆಯೂ ಇಲ್ಲಿ ನೆನಪಾಗುತ್ತದೆ. ಇವೆರಡರ ಸಾದೃಶ್ಯ, ವೈದೃಶ್ಯಗಳನ್ನು ಇಲ್ಲಿ ಗಮನಿಸಬೇಕು. ನವ್ಯದ ತಾತ್ವಿಕತೆಯನ್ನು ಹೇಳುವಲ್ಲಿಯೂ, ನವೋದಯ ಕಾವ್ಯಕ್ಕೆ ಪ್ರತಿಕ್ರಿಯೆ ರೂಪವಾಗಿ ಒಂದು ಕಾಲಘಟ್ಟದ ಅಲೋಚನಾ ಕ್ರಮವನ್ನು ಅಡಿಗರ ಪ್ರಾರ್ಥನೆ ಕವಿತೆ ಕಾಣಿಸಿದರೆ, ಜಯಪ್ರಕಾಶರ 'ಪ್ರಾರ್ಥನೆ' ತನ್ನ ಕಾಲದ ಹಿಂಸಾತ್ಮಕ ಒತ್ತಡದಲ್ಲಿ ಹುಟ್ಟಿಕೊಂಡಿದೆ. ಹೋರಾಟದ ಹಿನ್ನೆಲೆಯ ಕವಿ ಈ ಕವಿತೆಯಲ್ಲಿ ಕಾರಾಗೃಹದ ಅಧಿಕಾರಕೇಂದ್ರಿತ ಪರಿಭಾಷೆಯಲ್ಲಿ ಮನುಷ್ಯ ಮೂಲಭೂತ ಅವಶ್ಯಕತೆಯಿಂದ ವಂಚಿತವಾಗಿ ತುಂಬಿಹೋಗಿರುವ ವರ್ತಮಾನವನ್ನು ಕಾಣಿಸುತ್ತಾರೆ.

ಇಲ್ಲಿ ಹಲವು ಕಾರಣಗಳಿಗಾಗಿ ಇತಿಹಾಸ ಪ್ರಜ್ಞಾನೆಲೆಯ 'ಟೀಪು' ಕವಿತೆಯನ್ನು ಗಮನಿಸಬೇಕು. ಇಲ್ಲಿ ಟಿಪ್ಪುಸುಲ್ತಾನನ್ನು ಕವಿ ಕಂಡಿರುವ ಬಗೆ ವಿಶಿಷ್ಟವಾಗಿದ್ದು, ಆತನ ವ್ಯಕ್ತಿತ್ವ ಕಾವ್ಯಾತ್ಮಕ ರೂಪ ಪಡೆದಿದೆ.

ಮುಗಿಲ ಮನೆಯೆಡೆ ಮುಖಮಾಡಿ ಸದಾ
ಖುದಾನ ಹರಕೆಗಳಂತಿರುವ ಬೆಳ್ಳಕ್ಕಿಗಳನ್ನು
ಕೈಚಾಚಿ ಎಷ್ಟೊಂದು ಕರೆದ
ತನ್ನ ತೋಟದಂಗಳಕ್ಕೆ
ಉಂಗುರ ಬೆರಳಿನ ಉಗುರ ಮೈದಾನಕ್ಕೆ
ಚುಕ್ಕೆಗಳಾಗುವುದಕ್ಕೆ (ಟೀಪು)

ಟೀಪುವಿನ ಮಹತ್ವಾಕಾಂಕ್ಷೆ, ಆತ ಅದಮ್ಯವಾದ ಕನಸುಗಾರ ಎಂಬುದನ್ನು ಆತ ಸಾಮ್ರಾಜ್ಯ ಕಟ್ಟಲು ಬ್ರಿಟಿಷರನ್ನು ಹೊರಗಟ್ಟಲು ನೆಪೋಲಿಯನ್ ಆದಿಯಾಗಿ ಹಲವರ ಸಹಾಯ ಕೋರಿದ್ದನ್ನು ಇಲ್ಲಿನ ಆರಂಭದ ಸಾಲುಗಳು ಹೇಳುವಂತಿದೆ.

ಕಣ್ಣೊಳಗೆ ಲಾಲ್ ಖಿಲಾದ ಕರೆ ಉರಿವ ದೀವಟಿಗೆ
ಎಡದ ಕಿವಿಯಲ್ಲಿ ನುಡಿವ ನಮಾಜು ಮೌನ
ಬಲದ ಕಿವಿಯಲ್ಲಿ ಮೊಳಗೋ ಶ್ರೀರಂಗನ ಗಂಟೆಗಳ ಗಾನ
ಹರಿವ ನೀರೆಷ್ಟು ನದಿ ಕಾವೇರಿಯಲ್ಲಿ
ಎಂತೆಂತಹ ಸೆಳವು ಸೈನಿಕ ಕವಾಯತಿನ ಸಾಲಿನಲ್ಲಿ
ಆತ ಗಾಯಗೊಂಡ ಮೈಸೂರು ಹುಲಿ
ವಿಜಯಿ, ಅಹಂಕಾರಿ, ದುಃಖಿ, ವಿನೀತ
ಎಷ್ಟೊಂದು ಅರಿಯಬಲ್ಲ ದಾರ್ಶನಿಕ, ದೊರೆ
ಹೆಣೆಯುತ್ತಲೇ ಇದ್ದ ಕನಸುಗಳ ಚಿತ್ತಾರ
ಕೆತ್ತುತ್ತಲೇ ಇದ್ದ
ಮುಂಗೈ ನಜ್ಜಿದಾಗಲೂ ಚಿತ್ರಗಳ ಪತ್ಥರ
ರುಖಯ್ಯಾ ಧಾವಿಸುತ್ತಿದ್ದ ನಿನ್ನ ಪ್ರೀತಿ ಹತ್ತಿರ (ಟೀಪು)

ಪರಧರ್ಮ ಸಹಿಷ್ಣುವಾಗಿದ್ದ ಟೀಪುವಿನ ರಾಜ್ಯ ವಿಸ್ತರಣೆಯ ಮಹತ್ವಾಕಾಂಕ್ಷೆ, ಟೀಪುವಿನ ವ್ಯಕ್ತಿತ್ವದ ದರ್ಶನವೇ ಇಲ್ಲಿ ವ್ಯಕ್ತವಾಗುತ್ತದೆ. ನಮ್ಮ ಕಾಲದ್ದಲಿ 'ಟೀಪು ಮತಾಂಧ', 'ಹಿಂದೂದ್ರೋಹಿ' ಎಂಬ ಬೀಸು ಮಾತುಗಳು ವಿಜೃಂಭಿಸುತ್ತಿರುವ ದಿನಗಳಲ್ಲಿ ಕವಿ ಟೀಪುವನ್ನು ಸೌಹಾರ್ದತೆಯ ನೆಲೆಗಟ್ಟಿನಲ್ಲಿ ಕಂಡುಕೊಂಡಿದ್ದಾರೆ.

ನಮ್ಮ ಬದುಕಿನ ಭೂತ ವರ್ತಮಾನ ಮತ್ತು ಭವಿಷ್ಯಗಳನ್ನು ಗ್ರಹಿಸುವ ವಿಧಾನಗಳಲ್ಲಿ ಚರಿತ್ರೆಯ ಪರಿಕಲ್ಪನೆ ಬಹು ಮುಖ್ಯವಾದದ್ದು. ಆದರೆ ಚರಿತ್ರೆ ಎಂಬುದು ಕೇವಲ ಭೂತಕಾಲದ ಅಧ್ಯಯನವಲ್ಲ. ಅದು ಜನ ಜೀವನದ ಎಲ್ಲಾ ಕಾಲಘಟ್ಟಗಳನ್ನು ಬದುಕುವ ರೀತಿಗಳನ್ನು ವರ್ಗ ಸಂಬಂಧಗಳನ್ನು, ಇಡಿಯಾಗಿ ಅರ್ಥ ಮಾಡಿಕೊಳ್ಳುವ ಅಧ್ಯಯನ. ಚರಿತ್ರೆ ಯಾವುದೋ ಒಂದು ಕಾಲಘಟ್ಟದ ಘನೀಕರಿಸಿದ ವಾಸ್ತವ ಎಂಬ ತಪ್ಪು ಕಲ್ಪನೆ ಅನೇಕರಲ್ಲಿದೆ. ಕತ್ತಿ, ಗುರಾಣಿ, ಶಾಸನ, ತಾಳೆಗರಿಗಳು ಅಥವಾ ಪತ್ರಾಗಾರಗಳಲ್ಲಿ ದೊರೆಯುವ ದಾಖಲೆಗಳೇ ಜನ ಜೀವನದ ಬಗ್ಗೆ ನಿರ್ದಿಷ್ಟ ವ್ಯಕ್ತಿಗಳು ತಮ್ಮ ಪೂರ್ವಾಗ್ರಹ ರಾಜಕೀಯ ಆಯ್ಕೆ ಮತ್ತು ಆಶಯಗಳ ಕಣ್ಣಲ್ಲಿ ಅರ್ಥೈಸಿಕೊಂಡ ವಿದ್ಯಮಾನಗಳು. ಅವುಗಳನ್ನೇ ನಮ್ಮ ದೃಷ್ಟಿಕೋನಕ್ಕೆ ತಕ್ಕಂತೆ ಆಯ್ದುಕೊಂಡು ದಾಖಲೆಗಳನ್ನು ಮುಂದಿಟ್ಟು ವಾದಿಸುವುದು ಈಗಲೂ ನಡೆದಿದೆ. ಟೀಪುವಿನ ರಾಜ್ಯಾಡಳಿತ, ದೇಶಾಭಿಮಾನ ಮತ್ತು ಮತೀಯ ಆಯ್ಕೆಗೆ ಸಂಬಂಧಿಸಿದ ವಿವಾದಗಳಲ್ಲಿ ಈ ಗೊಂದಲ ಹಾಸುಹೊಕ್ಕಾಗಿದೆ. ಒಂದು ಬಣದ ಜನ ಮತ್ತೊಂದು ಬಣದ ಅಭಿಪ್ರಾಯಗಳನ್ನು ವಿರೋಧಿಸುವಾಗ ತಮ್ಮ ಬಳಿ ಮಾತ್ರ ಚಾರಿತ್ರಿಕ

ದಾಖಲೆಗಳಿವೆ ಎಂದು ನಂಬುತ್ತಾರೆ. ಆದರೆ ವಾಸ್ತವಾಗಿ ಅವರು ಹೇಳುವ ದಾಖಲೆಗಳೂ ಸಹ ಅವನ್ನು ಸೃಷ್ಟಿಸಿದ ವ್ಯಕ್ತಿಗಳು ಅರ್ಥೈಸಿಕೊಂಡ ವಿದ್ಯಾಮಾನಗಳ ಚಿತ್ರಣ ಎಂಬುದನ್ನು ಮರೆಯುತ್ತಾರೆ.

ಕಲ್ಲಿನ ಮೇಲೆ ಕೊರೆದಾಕ್ಷಣ ಅಥವಾ ಕಾಗದದ ಮೇಲೆ ನಮೂದಿಸಿದಾಕ್ಷಣ ಅವು ವಾಸ್ತವದ ದಾಖಲೆಗಳಾಗಲಾರವು. ಆದ್ದರಿಂದ ನಾವು ಚಾರಿತ್ರಿಕ ವಾಸ್ತವದ ಹಕ್ಕುದಾರಿಕೆಯನ್ನು ಬದಿಗಿಟ್ಟು ನಮ್ಮ ಆಯ್ಕೆ, ದೃಷ್ಟಿಕೋನಗಳ ಬೆಳಿನಲ್ಲಿ 'ದಾಖಲೆ'ಗಳನ್ನು ಅರ್ಥಮಾಡಿಕೊಳ್ಳವುದು ಸರಿಯಾದ ಕ್ರಮವೆನಿಸುತ್ತದೆ. ಟೀಪುವನ್ನು ಮತಾಂಧನೆಂದು ಅಥವಾ ಮತೀಯ ಸೌಹಾರ್ದತೆಯ ಹರಿಕಾರನೆಂದು ಅರ್ಥೈಸಿಕೊಳ್ಳುವ ಸ್ವಾತಂತ್ರ ಎಲ್ಲಾ ಲೇಖಕರಿಗೂ ಇದೆ. ಆ ಮೂಲಕ ನಾವೇ ಮತಾಂಧರೋ, ಪರಧರ್ಮ ಸಹಿಷ್ಣರೋ ಎಂಬುದನ್ನು ಪ್ರಜ್ಞಾಪೂರ್ವಕವಾಗಿಯೋ ಅಥವಾ ತಿಳಿಯದೆಯೋ ಹೇಳುವುದು ಸಾಧ್ಯ. ಬಂಜಗೆರೆಜಯಪ್ರಕಾಶರ ಈ ಕವಿತೆಯಲ್ಲಿ ಟೀಪು ಮತೀಯ ಸೌಹಾರ್ದತೆಯ ಸಂಕೇತವಾಗಿ, ದೇಶಾಭಿಮಾನಿಯಾಗಿ ಚಿತ್ರಿತವಾಗುವುದು ಟೀಪುವಿನ ಬಗ್ಗೆ ಮಾಡುವ ಸಂಶೋಧನೆಯಲ್ಲ. ಬದಲಿಗೆ ತನ್ನ ಆಶಯಗಳನ್ನು ಟೀಪುವಿನ ಮೂಲಕ ಜನರ ಮುಂದೆ ಇಡುವ ಪ್ರಯತ್ನ. ಇದೇ ಮಾತುಗಳನ್ನು ಎಸ್.ಎಲ್.ಭೈರಪ್ಪನವರ ಆಯ್ಕೆಯ ಬಗೆಗೂ ಹೇಳಬಹುದು.

ಬಂಡಾಯ ತಾತ್ವಿಕತೆಯೊಂದಿಗೆ ಗುರುತಿಸಿಕೊಂಡಿರುವ ಕೆಲವೇ ಕೆಲವು ಕವಿಗಳಲ್ಲಿ **ಶಂಕರಕಟಗಿ**ಯವರೂ ಒಬ್ಬರು. ಇವರು 'ಮುಸ್ಸಂಜೆ ನೆರಳಲ್ಲಿ', 'ದಟ್ಟ ದಾವಣಿ', 'ಗಣಿಯನಾದ' ಕವನ ಸಂಕಲನ ಪ್ರಕಟಿಸಿರುವರು ಬಂಡಾಯದ ಘೋಷಣೆ, ಮಾತು ಪ್ರಧಾನತೆಯಿಂದ ಭಿನ್ನವಾಗಿ ಕಟಗಿಯವರ ಕವಿತೆಗಳು ಕಾಣಿಸುತ್ತದೆ. ಈ ಕಾರಣವಾಗಿ ಅವರ ಕಾವ್ಯವನ್ನು ಬಂಡಾಯದ ನೆರಳಲ್ಲಿ ಗುರುತಿಸುವುದು ಕಷ್ಟವಾಗುತ್ತದೆ. ಕಾವ್ಯವೆಂದರೆ ರೂಪಕ, ಅಲಂಕಾರ ಇತ್ಯಾದಿ ಎಲ್ಲವೂ ಕೂಡಿಕೊಳ್ಳ–ಬೇಕೆಂಬುದೇನೋ ಸರಿ. ಆದರೆ, ಇವುಗಳನ್ನು ಹತ್ತಿರಕ್ಕೆ ತೆಗೆದುಕೊಳ್ಳದೆಯೂ ಕಾವ್ಯದ ಮೂಲಕ ಶಂಕರ ಕಟಗಿಯವರು ಕೊಡುವ ಚಿತ್ರಗಳು ಗಮನಾರ್ಹ.

ತಿಪ್ಪೆಯಲಿ ಅನ್ನ ಹುಡುಕುವ ಮಕ್ಕಳಿಗೆ
ಹಸಿವಾಗದಿರಲೆಂದು ತಾಯಿ ಕಟ್ಟಿದ್ದಾಳೆ
ರಟ್ಟೆಗೆ ಮಂತ್ರಿಸಿದ ತಾಯತ

ಭಿಕ್ಷೆ ಬೇಡಿ ಲಜ್ಜೆಯುಣ್ಣುವ ಹೆಂಗಸು
ಪೊಲೀಸು ಲಾಕಪ್ಪಿನಲಿ ಸತ್ತಳು ಮಹಜರ್‌ಗಾಗಿ
ತೆರೆದ ಕಡತದಲ್ಲಿ ಹಸಿದೆರಡು ಕಣ್ಣುಗಳಿದ್ದವು (ಹಸಿವಿನ ಪದ್ಯಗಳು)

ದಾರುಣ ಸಮಾಜದೊಳಗಿನ ನೋಟದೊಳಗಿನ ನೋಟವನ್ನು ಹೇಳುವ ಕವಿ ಹಸಿವಿನಿಂದ ನೋಯುತ್ತಿರುವ, ಸಾಯುತ್ತಿರುವ ಜೀವಗಳನ್ನು ಕಂಡು ಘಾಸಿಗೊಂಡಿದ್ದಾರೆ. ಅಧಿಕಾರಿಶಾಹಿಗಳ ಮುಂದೆ ನಡೆಯುತ್ತಿರುವ ನಿಷ್ಪಾಪಿ ಕೃತ್ಯಗಳ ಬಗೆಗಿನ ಸಿಟ್ಟನ್ನು ತಣ್ಣಗೆ ವ್ಯಕ್ತಪಡಿಸುತ್ತಾರೆ.

ಪುಟ್ಟ ಇರುವೆಯ ಸಾಲು
ನೆಲಬಿಟ್ಟು ಬಿಲ ಸೇರುವ ಪರಿಯ
ಕರುಳ ಕಣ್ಣಲಿ ಹಿಡಿದು ದಿಟ್ಟಿಸುತ್ತೇನೆ. (ಗಾಂಧೀಜಿಗೆ)

ಕರುಳ ಕಣ್ಣಲ್ಲಿ ತನ್ನ ಸುತ್ತಲಿನ ಜಗವನ್ನು ತುಂಬಿಕೊಳ್ಳುವುದರಿಂದಲೇ ಹವಣಿಸುವುದರಿಂದ ಶಂಕರ್ ಕಟಗಿಯವರ ಕಾವ್ಯಕ್ಕೆ ಒಂದು ಮಾನವೀಯ ಪ್ರಾಪ್ತವಾಗಿದೆ.

ಸೋರುತಿದೆ ಮನೆ- ಮನೆ; ಮಂದಿರ ಮಸೀದಿಗಳ ಮಾಳಿಗೆ
ಕದನ ವಿರಾಮಗೊಂಡಿದೆ ಭಾವೈಕ್ಯ ಬಂದಳಿಕೆಯಾಗಿದೆ (ಶರೀಫ)

ಮಹಾಮೌನಕೆ
ನಾವೀಗ ಪ್ರಾರ್ಥಿಸಬೇಕಾಗಿದೆ
ಬಾಬಾ.... ದುವಾ ಮಾಡು
ತಾಲಿಬಾನ್ ಮಾಡಿದ ತಪ್ಪಿಗೆ (ಬುದ್ಧ ಬೊಗಸೆಯಲಿ)

ನಮ್ಮ ಕಾಲದ ತಲ್ಲಣವನ್ನೆ ಈ ಕವಿತೆಗಳ ಮೂಲಕ ಕವಿ ಮಾತನಾಡುತ್ತಾರೆ. ಮನೆ- ಮನೆಯ ನಡುವಿನ ಭಾವೈಕ್ಯತೆಯೇ ನಿಷೇಧಕ್ಕೆ ಒಳಗಾಗಿರುವ ಉಸಿರುಗಟ್ಟಿಸುವ ವಾತಾವರಣವನ್ನು ನಮ್ಮ ಮನಸ್ಸಿಗೆ ಈ ಕವಿತೆಗಳು ತರುತ್ತಿವೆ. ಇದನ್ನು ಶರೀಫನ ಬಳಿ ನಿವೇದಿಸಿಕೊಳ್ಳುತ್ತಾ ಬುದ್ಧನ ಮಾರ್ಗದ ಕಡೆಗೆ ಗಮನಸೆಳೆಯುತ್ತಾರೆ.

ಸಂಪ್ರದಾಯಕೆ
ಬೆಂಕಿ ಇಟ್ಟು
ಬೇಲಿಯಾಚೆ
ನಾವು ಮೈ
ಕಾಯಿಸಿರುವುದು ದಿಟ
ಬೂದಿಯಾದೆವು ನಾವು
ಬೀದಿ ಮಾತುಗಳಿಗೆ
ಆದರೆ

ಕಿಚ್ಚು ತುಂಬಿದ ಮರ
ಆಗುವ ಬಗೆ ಹೇಗೆ? (ಸಂಪ್ರದಾಯಕೆ ಬೆಂಕಿ)

ಬೆರಳಿನ ಗುರುತಿಗೆ ಕೊರಳನು ಕುಯ್ದರು
ಶತಮಾನದ ಸೇಡು
ಮಾತನು ಕಸಿದರು ಮೆದುಳನು ತಿಂದರು
ಅಕ್ಷರ ಕಲಿ ಏಳು (ಅಕ್ಷರದ ಹಾಡು)

ಸಂಪ್ರದಾಯವನ್ನು ಧಿಕ್ಕರಿಸುವುದು, ಬುಡಮೇಲು ಮಾಡುವುದು ಮತ್ತು ಅಕ್ಷರ ಕಲಿಯಲು ಒತ್ತಾಯಿಸುವುದರ ಹಿಂದೆ ಈ ಕವಿಗೆ ತನ್ನ ದೇಶದ ಆಚಾರ–ವಿಚಾರಗಳ ಅರಿವಿದೆ, ದ್ರೋಣನಂತಹ ಗುರುವಿನಿಂದ ಅನ್ಯಾಯಕ್ಕೆ ಒಳಗಾದ ಏಕಲವ್ಯನ ನೆನಪಿದೆ. ಹಾಗಾಗಿ ತನ್ನ ಮುಂದಿನ ತಲೆಮಾರಿಗೆ ದಾಟಿಸುವ ವಿವೇಕ ಅಕ್ಷರ ಮಾತ್ರವೇ ಎಂಬ ದೃಢವಾದ ನಂಬುಗೆ.

ಶಂಕರಕಟಗಿಯವರ ಸರೀಕರಾಗಿಯೂ ಬಂಡಾಯದ ತಾತ್ವಿಕತೆಯೊಂದಿಗೆ ತಮ್ಮ ಕಾವ್ಯದ ಹೆಜ್ಜೆಗಳನ್ನು ದೃಢವಾಗಿ ಊರಿರುವ ಕವಿಗಳಲ್ಲಿ **ಚಂದ್ರಶೇಖರತಾಳ್ಯ** ಪ್ರಮುಖರು. 'ನನ್ನ ಕಣ್ಣಗಲಕ್ಕೆ', 'ಸಿಂಧೂ ನದಿಯ ದಂಡೆಯ ಮೇಲೆ', 'ಸುಡುವ ಭೂಮಿ' 'ಎಲ್ಲಿ ನವಿಲು' ಹೇಳಿರೆ ಕವನ ಸಂಕಲನಗಳನ್ನು ಪ್ರಕಟಿಸಿರುವ ಈ ಕವಿ ಸದ್ಯ ತಮ್ಮ ಕಾವ್ಯದ ಹಾದಿಯನ್ನು ಸ್ಪಷ್ಟಮಾಡಿಕೊಂಡಂತೆ ಕಾಣಿಸುತ್ತಾರೆ.

ಹೇಗೆ ಪಿಸುಗುಡಲಿ
ಈ ಸಂತೆಯಲ್ಲಿ
ನಾನು ಕವಿಯೆಂದು (ಹೇಗೆ ಪಿಸುಗುಟ್ಟಲಿ)

ಅದು ನನ್ನದೇ ನೋವೆಂಬ ಇಷ್ಟೆ ಸಂತಸದಲ್ಲಿ
ನನ್ನ ರಕ್ತದ ಬಣ್ಣ ನನಗೆ ತಿಳಿಯುವ ಬಯಕೆ ( ಸ್ವಂತಿಕೆ)

ಇದು ಸಂತೆ ಎಂದು ಗೊತ್ತಿದ್ದೂ ಕಾವ್ಯಕರ್ಮದಲ್ಲಿ ತೊಡಗಿರುವ ಕವಿ ಇಂತ ಮಾತುಗಳನ್ನು ಆಡಲು ಕಾರಣವೇನು? ಎಂಬುದೇ ನಮ್ಮ ಕಾಲದ ಮುಖ್ಯ ಪ್ರಶ್ನೆಯಾಗಿ ಕಾಡುತ್ತದೆ. 'ಸಂತೆ' ಎನ್ನುವುದರ ಮೂಲಕ ತನ್ನ ಸುತ್ತಲು ಗದ್ದಲ, ಸ್ವಮಗ್ನತೆ, ಇವು ಕವಿಯನ್ನು ಕಲಕಿದೆ. ಹೀಗಿದ್ದೂ ನೋವಿನ ಆಳವನ್ನು ತಿಳಿಯುವ ತಾಳ್ಮೆಯಲ್ಲಿ ಈ ಕವಿ ಕಾಯುತ್ತಾ ಕುಳಿತಿದ್ದಾನೆ. ನಮ್ಮ ಕಾಲದ ಕವಿಗಳ ಸ್ಥಿತಿಯೂ ಇದೆ ಆಗಿದೆ ಎನ್ನುವುದನ್ನು ಕವಿತೆ ಕಾಣಿಸುತ್ತದೆ.

ಮುರುಕು ಜೋಪಡಿ ಹಣತೆ ಬೆಳಕು
ಜೀವ ಜಾಲದ ಕೊನೆಯ ತುಣುಕಂತಿರುವ
ಉರಿದ ಕಟ್ಟೆ, ಜಾಳು ನೆಯ್ಗೆಯ ಜಾಳು
ಕಂಡರಾಚೆಗೆ ಆಕಾಶವೂ ಚಚೌಕ, ಬೊಳು (ಏನು ಹೇಳಲಿ)

ಮರಳು ಒಂದೊಂದೆ ಕಣ ಜಾರುತ್ತಿದೆ.
ರೆಪ್ಪೆ ತೆರೆದರೆ ಒಳಗೆ ತೂರುತ್ತದೆ.
ಒಳಗೇನೋ ಹೆಪ್ಪುಗಟ್ಟಿದ ಸೂತಕ
ಯಾರು ಸತ್ತರು ಇಲ್ಲಿ ಈ ಹಿಂದಿನ ಕ್ಷಣ (ತೋಟವಿಲ್ಲದ ಊರು)

ಯಾರ ದಯವಿನ್ನು
ಈ ಕಾಣದ ಕೊಡಲಿಯ ಕಡಿದೀತು
ಮೆತ್ತಿದ ರಕ್ತವ ತೊಳೆದೀತು (ಒಂದು ಕೊಲೆ)

ಈ ಮೂರು ಕವಿತೆಗಳು ಬೇರೆ ಬೇರೆಯಾದರು ಅವು ಮಾತನಾಡುತ್ತಿರುವುದು ಒಂದೇ ವಿಷಯದ ಮೇಲೆ. ಅದು ನಮ್ಮ ಕಾಲದ ಧಾರ್ಮಿಕ ಸಂಘರ್ಷ ಎಂದು ಕರೆಯಿಸಿಕೊಳ್ಳುತ್ತಿರುವ ಕೋಮುವಾದವೇ ಆಗಿದೆ. ಭಗ್ನಗೊಂಡ ಮೂರ್ತಿ, ಹೆಪ್ಪುಗಟ್ಟಿದ ಸೂತಕ, ಕೊಡಲಿಗೆ ಮೆತ್ತಿರುವ ರಕ್ತ ಇವುಗಳ ಮೂಲಕ ಕವಿ ವರ್ತಮಾನವನ್ನು ಹೇಳುತ್ತಿದ್ದಾನೆ. 'ದಯವೇ ಧರ್ಮದ ಮೂಲವಯ್ಯ' ಎಂದು ಜಂಗಮವಾಣಿಯನ್ನು ವಚನಕಾರರು ನುಡಿದಿರುವರು. ಕವಿ 'ಯಾರ ದಯ' ಕಾಯುತ್ತದೆ ಎಂದುಕೊಳ್ಳುತ್ತಿರುವುದು ಕವಿಯ ಅಂತಃಕರಣವನ್ನು ಬಿಂಬಿಸುತ್ತದೆ. ಸಂತೋಷವಿಲ್ಲ ಎನ್ನುವುದನ್ನು 'ಚಚೌಕ ಬೋಳು', 'ತೋಟವಿಲ್ಲದ ಊರು', ಇಂತಹವು ಕಾಣಿಸುತ್ತದೆ.

ಒಂದು ನದಿಯ ಹಾಗೆ ನಾವು
ಹರಿಯಬೇಕು, ಹಿಂದಿನದನು ತೊರೆಯಬೇಕು
ಕಟ್ಟು ಮುರಿದು ಸಾಗಬೇಕು
ಒಂದು ನದಿಯ ಹಾಗೆ ನಾವು
(ಒಂದು ನದಿಯ ಹಾಗೆ ನಾವು)

ಬೆಂಕಿನಾಲಗೆಯ ಎಣಿಸಿ
ಗಾಳಿ ಕಾಲುಗಳ ಮಣಿಸಿ
ಹರಿವ ನೀರಿನ ಸೆಳೆವ ಒಳಗೊಳಿಸಿ

ಮಣ್ಣಿನರಮನೆಯಲ್ಲಿ ಮಾತಿನ ಮೊಗ್ಗಿರಿಸಿ
ಕಾದೆನು ಕಾದೆನು ಕಾಯುತ್ತಲೇ ಇರುವೆನು
ಅರಳುವ ಸರಸಕ್ಕೆ
ನೋಟದೊಂದು ಸಮರಸಕ್ಕೆ

(ಕವಿತೆಯೆಂಬ ಗೆಳತಿಗೆ)

ಹರಿಯುವ ಗುಣವೊಂದಿರುವ ನದಿ ಸುಮ್ಮನೇ ಸಾಗುತ್ತದೆ ತನ್ನ ದಾರಿಗುಂಟ. ನದಿಗೆ ಯಾವುದನ್ನೂ ಹಿಡಿದಿಟ್ಟುಕೊಳ್ಳಬೇಕೆಂಬ ಹಂಬಲವಿಲ್ಲ. ಮನುಷ್ಯರಲ್ಲಿ ಆ ಗುಣವಿದೆ. ಅವನ ನೆನಪಿನಲ್ಲಿ ಹಿಡಿದಿಟ್ಟಿರುವುದು ಹಲವು ಸಂಗತಿಗಳಾದರೂ ಭಾವ ಸಂಬಂಧಿಯಾದ ಇತಿಹಾಸ ಅದರ ಕಾಲಾನುಕ್ರಮಣಿಕೆ ರಾಜರ ಅನ್ಯಾಯ, ಹಾಗೆಯೇ ಇವರು ಕೀಳು, ಅವರು ಮೇಲು ಎನ್ನುವ ತರತಮದ ಭಾವದಲ್ಲಿ ನದಿಯ ಗುಣವಿಲ್ಲ. ನಾವು ನದಿಯ ಹಾಗೆ ಎಂಬುದು; ನಮ್ಮ ಕಾಲದ ಮುಖ್ಯ ಅಪೇಕ್ಷೆ. ನದಿಯ ಹಾಗೆ ಕಟ್ಟು ಮುರಿದು ಸಾಗಲು ಕಾಣುವ ಕವಿಯ ಕನಸು ಅಂದುಕೊಂಡಾಕ್ಷಣ ನೆರವೇರುವುದಿಲ್ಲ. ಹಾಗಾಗಿ ಕವಿ ಕಾಲದೊಂದಿಗೆ ಕಾಯುತ್ತಿದ್ದಾನೆ.

ಎಲೆ ಮಾಮರವೆ, ಎಲೆ ಕೋಗಿಲೆಯೆ
ಎಲ್ಲಿ ದನಿಯ ಚಿಗುರು
ಎಲೆ ವಸಂತನೆ, ಎಲೆ ಮಂದಾನಿಲನೆ
ಎಲ್ಲಿ ಸುಡದ ಉಸಿರು

(ಎಲ್ಲಿ ಹಗಲ ತುಣುಕು)

ಕವಿ ಹುಡುಕುತ್ತಿದ್ದಾನೆ ಅಕ್ಕಮಹಾದೇವಿಯಂತೆ, ಒಂದು ಸಂಭ್ರಮದ ವಾತಾವರಣವಿರದ ತಾಣದಲ್ಲಿ; ಅಗಾಧ ಮೌನದಲ್ಲಿ, ನಮ್ಮ ಕಾಲದ ಹಲವು ಕವಿಗಳು ಮೇಲಿಂದ ಮೇಲೆ ವಚನಯುಗಕ್ಕೆ ಹೋಗಿ ಬರುವಂತೆ, ಸಂವಾದಕ್ಕೆ ಇಳಿಯುವಂತೆ ತಾಳ್ಯರ ಹಲವು ಕವಿತೆಗಳು ಮಾತನಾಡುತ್ತವೆ.

'ಅಮೃತಮತಿ ಸ್ವಗತ', 'ಗಾಜುಗೋಳ', 'ಲೋಹದಕಣ್ಣು' ಕವನ ಸಂಕಲನ–ಗಳನ್ನು ಪ್ರಕಟಿಸಿರುವ **ಎಚ್.ಎಲ್.ಪುಷ್ಪ** ಗಮನಿಸಬೇಕಾದ ಕವಿ. ಕಳೆದ ಶತಮನದ ಕೊನೆಯಲ್ಲಿ ಪ್ರಕಟವಾದ ಇವರ ಎರಡು ಕವನ ಸಂಕಲನಗಳು ಹೆಣ್ಣಿನ ಒಳಜಗತ್ತನ್ನು ದಿಟ್ಟತೆಯಿಂದ ನಿರೂಪಿಸಿವೆ. ಹೆಣ್ಣಿನ ಆತಂಕ ತೊಳಲಾಟವನ್ನು ಆರ್ದ್ರವಾಗಿ ಚಿತ್ರಿಸುವ ಪುಷ್ಪರವರ ಕಾವ್ಯದ ವಸ್ತುವಿನ ಆಯ್ಕೆ ಹೆಣ್ಣಿನ ಜೊತೆಗೆ ಸಮಾಜದ ವಿಷಮತೆಯನ್ನು ಆವರಿಸಿಕೊಂಡಿದೆ.

ದಾರಿ ಕಳಕೊಂಡಿದೆ ಈ ನನ್ನ ಕವಿತೆ

ಹೊದಿಸಿದ್ದಾರೆ ಮುಸುಕು ಆ ಗವಾಕ್ಷಿಗೆ
ಕಳೆದುಹೋದ ಕೀ ಸಿಗುವ ತನಕ
ತಳಮಳಿಸುತ್ತಿದೆ ಗಾಳಿ, ಬೆಳಕಿಲ್ಲದೆ
ದಾರಿ ತಪ್ಪಿಸಿಕೊಂಡ ದಾರಿಹೋಕನಂತೆ

(ದಾರಿ ಕಳಕೊಂಡಿದೆ ಕವಿತೆ)

ಕಳೆದುಕೊಂಡಿರುವುದರ ಹುಡುಕಾಟವೆ ಮುಖ್ಯವಾಗಿರುವ ಕವಿಗೆ ಬೀಗ ಜಡಿದಂತಿರುವ ಸ್ತಬ್ಧ ವಾತಾವರಣವನ್ನು ತಿಳಿಗೊಳಿಸುವ ಒಂದು ಬೀಗದ ಕೈನ ಅವಶ್ಯಕತೆ ಇದೆ.

ಹೌದು ಎಲ್ಲಾ ಜೋಡಿಸಬೇಕು
ಅಡಕಬೇಕು ಕ್ರಮ ಕ್ರಮವಾಗಿ
ಬೇಕು ಅದರದೇ ವಿಧಿ ವಿಧಾನಗಳು
ಯಾವುದೂ ಅಂದಗೆಡದಂತೆ
ಯಾವ ರಸವೂ ಬತ್ತಿಹೋಗದಂತೆ

(ಮುಸ್ಸಂಜೆಯಲ್ಲಿ)

ದಿಕ್ಕಾಪಾಲಾಗಿರುವ ವರ್ತಮಾನವನ್ನು ಜೋಡಿಸಬೇಕು ಎನ್ನುವ ಹಂಬಲವನ್ನು ತೋಡಿಕೊಳ್ಳುವ ಕವಿ ಜೀವಂತಿಕೆಯ ನಿರ್ಮಾಣಗಳ ಬಗೆಗೆ ಕಾಳಜಿ ವಹಿಸುತ್ತಾರೆ.

ಇಲ್ಲಿ ಒಲೆಯ ಮೇಲೆ
ಬೇಯುವ ಹೋಳಿಗೆಯ ಹೊಗೆ
ಅಲ್ಲಿ ಕಂಬಾಲುಪಲ್ಲಿಯಲ್ಲಿ
ಸುಟ್ಟ ನರಮಾಂಸದ ವಾಸನೆ
. . . . . . . . . . . . . . .
ಹೀಗೆ ಬೇವು ಬೆಲ್ಲವಾಗುತ್ತಾ
ಬೆಲ್ಲ ಬೇವಾಗುತ್ತ ಸಾಗುತಿದೆ ವರ್ಷ
ಚಿಗುರಾಗಿ, ಒಗರಾಗಿ, ಸಿಹಿಯಾಗಿ
ಮತ್ತೆ ಈ ನೆಲದೆಡೆಗೆ ಬಿತ್ತವಾಗಿ
ಹೋಳಿಗೆ ಹೊಗೆಯೊಳಗೆ ಎಲ್ಲರೂ
ಹೀಗೆ ಕರಗಿ ಹೋಗುತ್ತಿದ್ದೇವೆ

(ಉಗಾದಿಯ ಪುಟ್ಟ ಹಕ್ಕಿ ಹಾಗೂ ಒರಗು)

ಬೆಳಕ ಕಿರಣಗಳಿಗೇ ಬೆಂಕಿ ಹಚ್ಚ ಹೊರಟವರು
ಉಗುರಿಗೆ ಹತ್ತಿದ ಮಾಂಸದ ಚೂರು
ಜಿನುಗುವ ರಕ್ತವನ್ನು ಹೇಗೆ ಒರಸಿಕೊಂಡಾರು?
ಡರ್ರನೆ ತೇಗುತ್ತಿದೆ ಗೊಲ್ಗೊಥಾ
ಹಸಿವೆಂಬ ಹೆಬ್ಬಾವು ಬಸಿರ ಹಿಡಿದಂತೆ
ಮಾಗಿಯ ಚಳಿಯಲ್ಲಿ ಬೀಳುವ ಹಿಮವೂ
ಎದೆಯ ಕೊರೆಯುತ್ತಿದೆ ಕೊಲುವ ಚೂರಿಯಂತೆ

(ಶಿಲುಬೆಯಲ್ಲಿ ಗುಲಾಬಿ)

ಕರುಳಿಲ್ಲದ ಹೊಟ್ಟೆಯಿಂದ ಕತ್ತಿ ಇಣುಕುತ್ತದೆ.
ಈರುಳ್ಳಿಯಂಥ ಬಾಂಬ್ ಪೊರೆ ಬಿಡತೊಡಗುತ್ತದೆ
ಅದರ ಮೆದುಳಲ್ಲಿ ಅಮೇರಿಕಾದ ಭಾವುಟ ಅರಳುತ್ತದೆ.

ನಗುಮೊಗದ ವಸೂಲಿಗಾರರ
ಬತ್ತಳಿಕೆಯಲ್ಲಿ ಎಷ್ಟೊಂದು ಬಾಣಗಳು
ಲೋಹದ ಪಕ್ಷಿಗಳಿಗೆ ಅದೆಷ್ಟು ನಿಲ್ದಾಣಗಳು

(ಲೋಹದ ಕಣ್ಣು)

ನಮ್ಮ ಕಾಲದ ಹಿಂಸೆಯ ನಾನಾ ರೂಪಗಳ ಬಗೆಗೆ ಚಿತ್ರಿಸುವ ಕವಿ ಹಲವು ಟಿಸಿಲುಗಳಲ್ಲಿ ಇದರ ಪರಿಣಾಮವನ್ನು ಕಟ್ಟಿಕೊಡುತ್ತಾರೆ. ವೈರುಧ್ಯದ ಹಾದಿಯನ್ನು ಹಿಡಿದಿರುವ ಜೀವ ಪರಿಸರದ ಬಗ್ಗೆ ಕವಿ ಆತಂತಕ್ಕೀಡಾಗಿದ್ದಾರೆ. ಮೂರ್ತಿಭಂಜಕತೆಯೇ ವಿಜೃಂಭಿಸುತ್ತಿರುವ ಕಾಲದೊಳಗೆ ಕ್ರಿಸ್ತನ ಕರುಣೆಯ ಭೋದೆ, ಅವನ ಕಾಣ್ಕೆಯ ಬೆಳಕನ್ನು ಅರಿಯಲಾರದ ಮೂರ್ಖರನ್ನು ಕಣ್ಣ ಮುಂದೆ ತರುತ್ತಾರೆ. ಇಂಥವರನ್ನು ಮನುಷ್ಯರು ಎಂದು ಕವಿ ಒಪ್ಪಲಾರರು. ಏಕೆಂದರೆ, ಇವರ ನಡಾವಳಿಗಳು, ಕೃತ್ಯಗಳನ್ನು ನೊಡಿದರೆ ಇವರು ಮನುಷ್ಯಾಕೃತಿಯ ಲೋಹಗಳು. ಲೋಹದ ಕಣ್ಣು ಎನ್ನುವುದು ನಮ್ಮ ಕಾಲದ ಒಂದು ಸಮರ್ಥ ರೂಪಕವಾಗಿದ್ದು ವರ್ತಮಾನದ ಸಂಕಟವನ್ನು ಬಿಂಬಿಸುತ್ತದೆ. ಲೋಹದ ವಸ್ತುಗಳಾದ ಶಾಸನ, ತಾಮ್ರದ ಬರಹಗಳು, ಆಯಧ ಇವುಗಳಲ್ಲಿ ಆಸಕ್ತರಾಗಿರುವ ಜನಸಮೂಹ ಲೋಹವಾಗಿ ಕವಿಗೆ ಕಾಣಿಸಿರುವುದು ಆಶ್ಚರ್ಯವೇನೂ ಅಲ್ಲ. ಸಮಾಜದ ಮಧ್ಯೆ ಹೀಗೆ ಮಾತನಾಡುವಾಗಲು ಪುಷ್ಪರವರು ಹೆಣ್ಣಿನ ವೇದನೆಯನ್ನು ನೋಡದೆ ಬಿಡುವುದಿಲ್ಲ.

ಎಷ್ಟೋ ವರ್ಷದ ಈ ಸೀರೆ
ಜೂಲು ಜೂಲಾಗುತ್ತಿದೆ

ನಂಬಿಕೆ, ಅಪನಂಬಿಕೆಗಳ
ತಾಕಲಾಟದಲ್ಲಿ ಮತ್ತಷ್ಟು
ಪಿಂಜಿ, ಪಿಂಜಿ ಹೋಗುತ್ತಿದೆ
ತೊಗಲಿಗೆ ಅಂಟಿದ
ಜನ್ಮ ಜನ್ಮಾಂತರವೆಂಬ ವಾಸನೆ
ಸುಳ್ಳೋ, ನಿಜವೋ ಎಲ್ಲಾ ಲೋಕದ
ವ್ಯವಹಾರದ ದಾಟಿ ಸೂತ್ರ ಕಿತ್ತ
ಪಟ ಹಾರುತ್ತಿದೆ ಆಕಾಶದೆಡೆಗೆ (ಕುಣಿವ ನವಿಲುಗಳು)

ಆಧುನಿಕ ನಗರ ಜೀವನವನ್ನು ಯಶವಂತಚಿತ್ತಾಲರು ಕಥೆಗಳಲ್ಲಿ ತಂದಿರುವಂತೆ, ಕಾವ್ಯದಲ್ಲಿ ಪ್ರಧಾನವಾಗಿ ತಂದಿರುವ ಕವಿ **ಜಯಂತಕಾಯ್ಕಿಣಿ**. 'ಶ್ರಾವಣಮಧ್ಯಾಹ್ನ', 'ಕೋಟಿತೀರ್ಥ', 'ರಂಗದಿಂದೊಂದಿಷ್ಟು ದೂರ', 'ನೀಲಿಮಳೆ', 'ಒಂದು ಜಿಲೇಬಿ' ಕವನ ಸಂಕಲನಗಳಲ್ಲಿ ನಾವು ಕಾಣುವುದು ನಗರದ ತೆಕ್ಕೆಯಲ್ಲಿ ಸಿಲುಕಿರುವ ಜೀವಿಗಳ ನಿಟ್ಟುಸಿರ ತಾಪವನ್ನು.

ಮೈ ತುಂಬ ಗಾರೆಯ ಇಟ್ಟಿಗೆ ಹೊತ್ತುಕೊಂಡು
ಸಡಗರದಿಂದ ಪ್ರಚಂಡ ಕರತಾಡನಗಳ ನಡುವೆ
ನಾನು ಎದ್ದು ನಿಲ್ಲುವೆ
ಒಂದು ಗಾರೆ ಬಿದ್ದರೂ ಒಂದು ಶಿಶು ಸಾಯುತ್ತದೆ
ಸಾಕ್ಷಿಗೆ ಬರಬಹುದೆ
(ಹಕ್ಕಿ ಕೂರದ ಕೊರಗು)

ನಿದ್ದೆಗೆಟ್ಟ ಐದು ವರ್ಷದ ಪೋರ
ಕೊರಳ ಕರಿದಾರದ ತಗಡಿನ ತಾಯತ ಮಾರಲು
ಬಂದಿದ್ದಾನೆ ಬೆಳ್ಳಿ ಅಂಗಡಿಗೆ
ಎಲ್ಲರೂ ಅವನ ಗೇಲಿ ನಡೆಸಿದ್ದಾರೆ ಮತ್ತೆ ಮತ್ತೆ
ಅನ್ನುತ್ತಾನೆ ಎಷ್ಟು ಬರುತ್ತೋ ಕೊಡಿ
ಹರಕು ನೋಟಿನಂತೆ ಜೀವ
ಕದ್ದು ದಾಟುತ್ತಾನೆ ಮತ್ತೊಂದು ದಿನದ ಕೈಗೆ
ತಲೆಕೆಟ್ಟ ಸೂಳೆಯರು ರೈಲು ಹೊರಡಿಸಿದ್ದಾರೆ
ಸ್ಪೆಷಲ್ ರೈಲು. ಅವರು ಪ್ರತಿ ಸ್ಟೇಷನ್ನಿನಲ್ಲಿ ಕಿಲೋ ಲೆಕ್ಕದಲ್ಲಿ
ಶಿಶುಗಳನ್ನು ಮಾರಲಿದ್ದಾರೆ. ಬನ್ನಿ (ಇದು ಶಿಶು ಕಾಶಿ)

ಇದು ಪಕ್ಷಿಕಾಶಿ ಎಂದು ಕುವೆಂಪುರವರಿಗೆ ಕಂಡಿತ್ತು. ಆ ನಂತರ ಕಾಲವು ಸಾಕಷ್ಟು ಹರಿದಿದೆ. ಮನುಷ್ಯನ ಪರಿಸರ, ಅವನ ಜೀವನಕ್ರಮ ಪಲ್ಲಟಗೊಂಡಿವೆ. ಬದುಕಲಿಕ್ಕಾಗಿ ಹಲವು ಮಾರ್ಗಗಳನ್ನು ತುಳಿದಿರುವ ಜನರ ಮಧ್ಯೆ ಎಲ್ಲೋ ಗಾರೆ ಬಿದ್ದು ಒಂದು ಶಿಶು ಸಾಯುತ್ತದೆಯಲ್ಲ ಎನ್ನುವ ನೋವು ಕವಿಯದು. ಆದರೆ ಇಂತಹ ಸಾವಿಗಿಂತ ಅದು ಉಂಟು ಮಾಡುವ ಪರಿಣಾಮಕ್ಕಿಂತ ಕಾನೂನು,ವ್ಯವಸ್ಥೆ ಸಾಕ್ಷಿಗಾಗಿ ಹಾತೊರೆಯುವ ವೈರುಧ್ಯವನ್ನು ಕವಿ ಕಾಣಿಸುತ್ತಾರೆ.

ಇಂತಹ ವೈರುಧ್ಯವನ್ನು ಕಾವ್ಯದಲ್ಲಿ ಹಿಡಿದಿಡುವ ಜಯಂತರು ನಗರದ ವಿಸಂಗತಿಗಳನ್ನು ಎದೆಯಲ್ಲಿ ತುಂಬಿಕೊಳ್ಳಬಲ್ಲರು. ಹರಕು ನೋಟಿನ ಹಾಗೆ ಚಲಾವಣೆಯಲ್ಲಿ ಮಾತ್ರ ಇರುವ ವೇಶ್ಯೆಯರ ಸಜೀವವಲ್ಲದ ಸಂಕಟದ ದೈನಿಕವನ್ನು ಚಿತ್ರಿಸಬಲ್ಲರು. ಕಿಲೋ ಲೆಕ್ಕದಲ್ಲಿ ಶಿಶುಗಳನ್ನು ಮಾರಲಿದ್ದಾರೆ ಎನ್ನುವ ಮೂಲಕ ನಿರಂತರ ದೇಹ ತೆತ್ತುಕೊಂಡು ಬದುಕ ಬಂಡಿ ತಳ್ಳುತ್ತಿರುವವರ ನರಕವನ್ನು ಅನುಭವಕ್ಕೆ ತಂದುಕೊಡಬಲ್ಲರು.

ತೊಂಬತ್ತೆಂಟು ಡಬ್ಬಗಳಿವೆ ಈ ಸೀಮೆ
ಎಣ್ಣೆ ಕ್ಯೂನಲ್ಲಿ ವಿವಿಧ ಸೈಜು ಬಣ್ಣ ಶೇಪು
ಮೈ ತುಂಬ ಮಸಿ
ಮಾಸಿದ ಲಂಗದ ನೂಲಿನಂಚಿನ ಗಾಳಿ
ಬೆಮರು ಬೆರಳಿನ ಗುರುತು
ಒಡಕು ಬಳೆಗಳ ನಿನಾದ (ಬ್ರಹ್ಮಲಿಪಿ)

ಹಕ್ಕಿ ಹಾರುವ ಹಿಂಡು ಕುವೆಂಪುರವರಿಗೆ ದೇವರು ರುಜುಮಾಡಿದಂತೆ ಕಾಣಿಸಿದ ಹಾಗೆ, ಚಂದ್ರನ ಇರುವಿಕೆ ಯಾರೋ ಬಾನಿಗೆ ಕೊಟ್ಟ ಬಂಗಾರದ ಮೆಡಲ್‌ನಂತೆ ಕಾಣುವ ಹಾಗೆ, ಈ ಕವಿಗೆ ರೇಷನ್ ಅಂಗಡಿಯ ಮುಂದೆ ನಿಂತ ಜನರ ಸಾಲು ಕಾಣಿಸುತ್ತದೆ. ಇಲ್ಲೊಂದು ವ್ಯಂಗ್ಯವಿದೆ ಅನ್ನಿಸಿದರೂ ಅದರ ಹಿಂದೆ ಗಾಢ ಬಡತನ ಮತ್ತು ಅದಮ್ಯವಾದ ಕಾಯುವ ಸಹನೆಯನ್ನು ಇಂತಹ ಕವಿತೆ ಹೇಳುತ್ತದೆ. ಇವುಗಳ ಮಧ್ಯೆ ಕವಿ ಎಂದು ಕರೆಯಿಸಿಕೊಳ್ಳುವ ಕವಿಯ ಹಾರೈಕೆ ಏನೆಂದರೆ,

ಎಲ್ಲ ಆಸ್ಪತ್ರೆಗಳ ಬಾಗಿಲು ತೆರೆಯಲಿ
ಜ್ವರದ ಕಣ್ಣಿನ ಮಕ್ಕಳು ನನ್ನ ಮಡಿಲಿಗೆ ಬರಲಿ
ಕಿರಣ ಸೋಕಿದರೆ ಸಾಕು ಮಾಯಲಿ ಗಾಯ
ಒಡೆಯದಿರಲಿ ಕಂಬನಿಗೆ ಎದೆಯ ಹಾಲು (ಜಾಗರದ ಕೊನೆಗೆ)

ನಾವು ಪ್ರತಿದಿನ ನೋಡಿದರೂ ಕಾಣದೆ ಹೋದ ಹಲವು ಜೀವಂತ ಚಿತ್ರಗಳನ್ನು ಜಯಂತಕಾಯ್ಕಿಣಿ ಕವಿತೆಯಲ್ಲಿ ತರುತ್ತಾರೆ. ಸಾವಧಾನದಲ್ಲಿ ಎಲ್ಲವನ್ನು ಗಮನಿಸುವ, ಗಮನಿಸುವ ನೋಟದಲ್ಲಿ ಪ್ರೀತಿಯನ್ನು ಇರಿಸಿಕೊಂಡಿರುವುದು ಇಲ್ಲಿ ಸ್ಪಷ್ಟವಾಗುತ್ತದೆ.

ಜತನದಿಂದ ಜೀವ ತಂದ ಬಸ್ಸನ್ನು ತೊರೆದು ಊರಿಡೀ ಹರಿದು
ತಮ್ಮ ತಮ್ಮ ಚಾದರ ಸೇರಿಕೊಂಡವರಿದ್ದಾರಲ್ಲ- ಅವರಿಗೆಂದೂ-
ಈ ಚೆನ್ನಪ್ಪ ಅಕ್ಕಿ ಬೇಳೆ ಕೊಳ್ಳುತ್ತಿರುವುದು
ನಗೆ ನಾಟಕದಲ್ಲಿ ಹೋ ಎಂದು ಎದ್ದೆದ್ದು ನಗುವುದು
ಸೈಕಲ್ ಹಿಂಭಾಗದಲ್ಲಿ ಮಗಳನ್ನು ಊರಿಡೀ ತಿರುಗಿಸಿ
ಕೈತುಂಬ ಹಲ್ವ ತೆಗೆಸಿಕೊಡುವುದು-ಯಾಕೆ ಕಂಡಂತಿಲ್ಲ
ಅಪವೇಳೆಯಲಿ ಕತ್ತಲ ಮೋರಿಯಲ್ಲಿ ಚೆನ್ನಪ್ಪನ
ಹಿರೇ ಪೋರಿ ಟಿಫನ್ ಕ್ಯಾರಿಯರ್ ಬಿಚ್ಚಿ ಸ್ ಎಂದು ತಿಕ್ಕಿ ತೊಳೆಯುವ
ಸದ್ದು ಡಿಪೋದಲ್ಲೀಗ ಬಿಕೋ ನಿಂತಿರುವ
ತಗಡಿನ ಗೂಡಿನಷ್ಟೆ ಕೇಳಿಸುವದೆ (ಚೆನ್ನಪ್ಪನ ಮಕ್ಕಳು)

ಇನ್ನೊಬ್ಬರ ಮೇಲೆ, ಅವರ ಜೀವನದ ಮೇಲೆ ಆಸಕ್ತಿಯನ್ನೇ ಕಳೆದು-ಕೊಳ್ಳುತ್ತಿರುವ ಕಾಲದಲ್ಲಿ ಡ್ರೈವರ್ ಚೆನ್ನಪ್ಪನಂಥವರನ್ನು ಅವರ ಜೀವನ ಪ್ರೀತಿಯನ್ನು ಕಾಣಲಾರಷ್ಟು ಕುರುಡಾಗಿರುವ ಸಂದರ್ಭದ ದುರಂತವನ್ನು ಈ ಕವಿತೆ ಹೇಳುತ್ತಿದೆ. ಸ್ವಮಗ್ನತೆಯ ಆಚೆಗೆ ಇಣುಕಿದರೆ ನಮ್ಮದೂ ಆಗಬಹುದಾದ ಅನುಭವದತ್ತ ಈ ಕವಿ ಮನಸ್ಸು ಕೊಡುತ್ತಾರೆ.

ಕನ್ನಡ ಕಾವ್ಯದಲ್ಲಿ ಸ್ತ್ರೀಯರ ವೇದನೆ, ಅವರ ಹಪಹಪಿಕೆಗಳನ್ನು ಮಹಿಳಾ ಕಾವ್ಯದಲ್ಲಿ ಕಾಣುತ್ತಾ ಬಂದಿರುವ ನಮಗೆ ಲಂಕೇಶರ 'ಅವ್ವ' ಕವಿತೆ ಗಂಡಸಿನೊಳಗಿನ ಹೆಂಗರುಳನ್ನು ಬಿಚ್ಚಿ ತೋರಿತು. ಈ ಮಾತನ್ನು ಎರಡನೇ ಬಾರಿ ಬರೆದ ಅವ್ವ ಕವಿತೆಯ ಬಗೆಗೆ ಹೇಳಲಾಗುವುದಿಲ್ಲ. ಹೆಣ್ಣಿನ ವೇದನೆಯನ್ನು ತನ್ನದೂ ಎಂಬಂತೆ ಜಯಂತಕಾಯ್ಕಿಣಿ ಅನುಭವಿಸಿ ಬರೆದಿರುವುದಕ್ಕೆ ಅವರ ಈತನಕದ ಕವಿತೆಗಳಲ್ಲಿ ಕೆಲವು ಉದಾಹರಣೆಗಳು ಸಿಗುತ್ತವೆ.

ಮೋಡಗಳು ಬಾಗಿಲಲ್ಲೆ ಎದೆ ಒಡೆದು ಬೀಳುತಿವೆ
ಬೇಸಿಗೆಗೆ ಬಂದ ಅಕ್ಕ ಮರುಳುತಿಲ್ಲ (ಮೋಡಗಳು ಬಾಗಿಲಲ್ಲೆ)

ಹಾಗೆ ನೋಡಿ ಕಾಡಬೇಡಿ ನನ್ನ ಅಕ್ಕ ಸುಂದರಿ
ಧೂಳಿನಲ್ಲಿ ಬೆಳಕಿನಲ್ಲಿ ಬಿದ್ದುಕೊಂಡ ಕಿನ್ನರಿ (ನನ್ನ ಅಕ್ಕ ಸುಂದರಿ)

ಮಾತಿಲ್ಲದೆ ಹೊರಟು ನಿಂತವರು ಅವರು. ಇಲ್ಲಿ
ಕಾದಿದೆ ಕೆಂಡ ಒಲೆಗಳಲ್ಲಿ. ಮೀನಿಗಾಗಿ ಬಯಕೆ
ಪಟ್ಟಿದ್ದಾಳೆ ಹೆರಿಗೆಗೆ ಬಂದ ಬೇಬಿ. ರೇಡಿಯೋ
ಡಿಪ್ಲೋಮಾ ಮಾಡುವೆನೆಂದು ಊಟ ಬಿಟ್ಟಿದ್ದಾನೆ ತಮ್ಮ
(ದೋಣಿ)

ಕಣ್ಣಿವೆಯಲ್ಲಿ ಬಣ್ಣದ
ಮೋಡ ಬಂದರೆ
ಅಲ್ಲಿ ಒಡೆದ ಅಕ್ಕಂದಿರ
ಬಳೆ ಕಂಡರೆ
ಅಜ್ಜನನ್ನು ಅರಸಿ ಚಿಣ್ಣ ವೃದ್ಧಾಶ್ರಮಕ್ಕೆ ಬಂದರೆ
ಅದು ರಂಗೀಲಾ ರಂಗೀಲಾರೆ (ರಂಗೀಲಾ)

ಕಾಡು ಸುಲಿದು ನಾದಿ ಹುರಿದು
ಲಟ್ಟಿಸಿ ಮಾಡಿದ ಕಾಗದದಿಂದ
ಹೂ ಮಾಡುವ ಕಲೆ
ಕಲಿತುಕೋ ತಂಗಿ
ಬಂದವರು ಹೋಗುವುದರೊಳಗೆ ಬಾ
ಒಂದು ಸಲ ಹೊರಗೆ (ತಂಗಿ)

ಸುಂದರಿಯಾದ ಅಕ್ಕನನ್ನು ಕಾಡುವವರ, ಹೆರಿಗೆ ಬಂದಿರುವವಳ ಬಯಕೆಯನ್ನು ಅರಿಯುವ, ಒಡೆದ ಅಕ್ಕಂದಿರ ಬಳೆಗಳನ್ನು ನೆನಪಿಗೆ ತಂದುಕೊಂಡು ಕನಸ ಕಲ್ಪಿಸುವ, ತಂಗಿಯಂಥವರಿಗೆ ಸ್ವಂತದ ಹಾದಿಯಲ್ಲಿ ಬದುಕುವಂತೆ ಉದ್ದೀಪಿಸುವ ಮನುಷ್ಯ ಕಾಳಜಿಯನ್ನು ನಾವಿಲ್ಲಿ ಕಾಣುತ್ತೇವೆ. ಕವಿತನಕ್ಕಿಂತ ಎಲ್ಲರ ಒಳಿತಿಗಾಗಿ ಹಂಬಲಿಸುವ ಹೃದಯದ ಸದ್ದು ನಮಗಿಲ್ಲಿ ಕೇಳಿಸುತ್ತದೆ.

'ಸಿಕಾಡ', 'ಪ್ಯಾಂಜೀಯಾ', 'ಕದವಿಲ್ಲದ ಊರಲ್ಲಿ', 'ಒಂದು ನೂಲಿನ ಜಾಡು' ಕವನ ಸಂಗ್ರಹಗಳನ್ನು ಪ್ರಕಟಿಸಿರುವ ಕವಿ **ಜಿ.ಕೆ.ರವೀಂದ್ರಕುಮಾರ್**. ಸದ್ಯದ ಕನ್ನಡ ಕವಿತೆಗಳಿಗಿಂತ ತುಸು ಭಿನ್ನವಾಗಿ ಕಾಣುವ ಇವರ ಕವಿತೆಗಳು ಆಧುನಿಕತೆ ಮತ್ತು ಮನಷ್ಯ ಸಂಬಂಧಗಳ ಕುರಿತು ಮಂಡಿಸುವ ತರ್ಕ, ಎತ್ತುವ ಪ್ರಶ್ನೆ, ತೋರುವ ಪ್ರಯೋಗಶೀಲತೆ ಮುಖ್ಯವಾಗಿದೆ.

ಬೇಡವಾಗಿದ್ದರೆ ಬಿಸಿಲಲ್ಲಿ ಯಾಕೆ ಸೀಯಬೇಕು
ಬರಿಮೈಯಲ್ಲಿ ಚಳಿಯಲ್ಲಿ ಯಾಕೆ ಮಲಗಬೇಕು
ಕಾಲಲ್ಲಿ ಝಾಡಿಸಿಕೊಂಡರೂ
ಕೊಡವಿಕೊಂಡು ಯಾಕೆ ಎದ್ದು ಬರಬೇಕು
. . . . . . . . . . . . .
ಬೇಡದ ಬದುಕೇ ನೀನು ಬೇಕು (ಬೇಡದ ಬದುಕೇ ನೀನು ಬೇಕು)

ಹೊರೆದು ತಂದರೂ ಮೊರ ತುಂಬದ ಕಾಳು
ಅಣಕಿಸುವ ಹಸಿವ ಹಗೇವು
ಕಣ್ಣು ಸೋತರೂ ಸೋಲದ ಕಣ್ಣೀರು
ಮೂರಡಿಯ ಮುಕ್ಕನಲೂ ಒಂದೊಂದು ಕನ್ನಂಬಾಡಿ
ಕಟ್ಟೆಯನು ಒತ್ತೆಯಿಟ್ಟರೂ ಸಿಗದ ಬೊಗಸೆ ನೀರು
ಬೇಡಿದಷ್ಟೂ ಬೆಳೆವ ನೀರಡಿಕೆ
ಎಷ್ಟು ಎತ್ತರ ಗಂಟಲಿನ ಕೋಡಿ?
. . . . . . . . . . . . . . .
ಎಷ್ಟು ದೊಡ್ಡದು ಈ ಉಸಿರ ಮುರಲಿ? (ಬೆಳೆವ ಬೆರಗಿನಲಿ)

ಮನುಷ್ಯನ ಅಸ್ತಿತ್ವವನ್ನು ಅವನಿಗಾಗುವ ಹಸಿವನ್ನು, ಅವಮಾನವನ್ನು ಕೇಂದ್ರವಾಗಿರಿಸಿ ಕೊಂಡಿರುವ ಕವಿತೆಗಳಿವು. ಎಂಥಹ ಕ್ಷಣದಲ್ಲಿಯೂ, ನೋವಿನಲ್ಲಿಯೂ ಬದುಕಬೇಕು ಎಂದು ನಮ್ಮೊಳಗಿಂದಲೇ ಹುಟ್ಟಿಸುವ ಅಪೇಕ್ಷೆಯ ಕುರಿತು ಇಲ್ಲಿ ಪ್ರಶ್ನೆಯೂ ಇದೆ, ಈ ಮೂಲಕ ಬದುಕಿಗಿರುವ ಅದಮ್ಯವಾದ ಶಕ್ತಿಯನ್ನು ಕಾಣಿಸುತ್ತಾರೆ ಕವಿ. ಎಷ್ಟು ತುಂಬಿಕೊಂಡರೂ ಖಾಲಿ ಆಗುವ, ಖಾಲಿಯೆನಿಸುವ ಈ ಬದುಕಿನ ಮರ್ಮದ ಕುರಿತು ಕವಿಗೆ ಸೋಜಿಗವಿದೆ. ಇದೇ ಭಾವ ಕವಿಯಲ್ಲಿ ಮುಂದುವರೆಯುತ್ತದೆ.

ಬೆಳಗು ಬಂದುದೇ ಒಂದು ಬೆರಗು
ಇರುಳು ಹೋದುದೇ ಒಂದು ಬೆರಗು
ಕರೆದರೂ ಸರಿವ
ಕರೆಯದಿದ್ದರೂ ಬರುವ
ನಿಂತವರ ಮುಂದಿನ ಯಾನದಲಿ
ಬೆಳಗೆಂದರೆ ಬೇಡಿಕೊಳ್ಳುವ ಸೆರಗು
ಇರುಳೆಂದರೆ ನುಂಗಿಕೊಳ್ಳುವ ಕರುಳು

ನುಂಗುತ್ತ ಬೇಡುತ್ತ ತಳ್ಳಿಕೊಳ್ಳುವ ಜೀವಕ್ಕೆ
ಹರಿದುಕೊಂಡರೆ ಇರುಳು
ಹೊಲೆದುಕೊಂಡರೆ ಬೆಳಗು (ಕದವಿಲ್ಲದ ಊರಲ್ಲಿ)

ಬೇಂದ್ರೆ ಬೆಳಗಿನ ಬಗೆಗೆ ಅಭಿಜಾತವೆನಿಸುವ ಕವಿತೆಕೊಟ್ಟಿರುವರು ಕನ್ನಡ ಕಾವ್ಯಕ್ಕೆ. ಚೆನ್ನವೀರ ಕಣವಿ ಮೊದಲಾದವರೂ ಬೆಳಗಿನ ಪುಳಕವನ್ನು ಕಾವ್ಯದಲ್ಲಿ ಹಿಡಿದಿಟ್ಟಿದ್ದಾರೆ. ಈ ಕವಿ ಬೆಳಗನ್ನು ಸರಳವಾಗಿ, ಮೇಲ್ಮೈನಲ್ಲಿ ನೋಡಿದ್ದಾರೆ ಅನ್ನಿಸಿದರೂ ನಿಜದೊಂದಿಗೆ ಮಾತನಾಡುವ ಗುಣದಿಂದ ಈ ಕವಿತೆ ಮುಖ್ಯವೆಂದು ತೋರುವುದು. ಕತ್ತಲು–ಬೆಳಕು ನಿತ್ಯ ಆಗುವಂಥವು. ಆದರೆ ಈ ಆಗುವಿಕೆಯ ನಡುವೆ ಮನುಷ್ಯನ ಬದುಕು ಕಾಲನೊಂದಿಗೆ ಸರಿಯುತ್ತಾ ಬದಲಾಗುತ್ತಿರುತ್ತದೆ. ಈ ಬದಲಾವಣೆಗಳಲ್ಲಿ ದುಃಖ ಬಂದು ಹೋಗಬಹುದು, ಸಂತೋಷ ಪಲ್ಲವಿಸಬಹುದು ಆದರೆ ಯಾನ ನಿರಂತರ ನಡೆಯುತ್ತಲೇ ಇರುವುದು. ಬೆಳಗು ಎಲ್ಲರನ್ನೂ ಎಚ್ಚರಿಸುವ ಹಸಿವನ್ನು ನೀಗಿಕೊಳ್ಳಲು ಎಲ್ಲರನ್ನೂ ಕ್ರಿಯಾಶೀಲಗೊಳಿಸುವ ಬೆರಗು ಇಲ್ಲಿ ಕವಿಯನ್ನು ಕಾಡಿದೆ. ಹಸಿವಿನಂತೆ, ಸಂಬಂಧಗಳನ್ನು ಸಮಸ್ತವನ್ನು ಒಳಗೊಳ್ಳುತ್ತ ಹೊಲೆದು–ಕೊಂಡಾಗ ಮಾತ್ರ ಬದುಕಾಗುತ್ತದೆ. ಇಲ್ಲವೇ ದಿಕ್ಕಾಪಾಲಾಗುತ್ತದೆ ಎನ್ನುವ ನಂಬಿಕೆಯೇ ಈ ಕವಿತೆಯ ಧಾರೆಯಾಗಿದೆ.

ಹರಿದು ತಿನ್ನುವಾಗ
ಮತ್ತೆ ಬೇಕೆ ಎಂದಳು
ಕೈ ತೊಳೆದೊಡನೆ ಬಂದು ಎತ್ತಿಕೊಂಡಳು
ತಟ್ಟೆಯೂ ಅವಳ ಮಗುವಿನಂತೆ
ತೊಳೆದಿಟ್ಟು ನಕ್ಕಳು ಗುರುತಿಲ್ಲದಂತೆ
ಅವನು ತೇಗಿದ
ಅವಳು ಬೆಳಗಿದಳು

(ಏನು ಹೇಳಿಕೊಂಡಿತೋ ಬೊಗಸೆ)

ಹೆಣ್ಣು ಜೀವ ಮನೆಯಲ್ಲಿ ರೊಟ್ಟಿ ಮಾಡಿ ಹಾಕುವುದು ವಿಶೇಷವೇನೂ ಅಲ್ಲ. ಆದರೆ ಹಾಗೆ ರೊಟ್ಟಿಮಾಡುವಾಗ ಅವಳ ಮನಸ್ಸು ಏನನ್ನು ಮಾತನಾಡಿತು? ಯಾವ ಕಷ್ಟವನ್ನು ಆಡಲಾರದೆ ಉಳಿಸಿಕೊಂಡಿತು? ಏನೆಂದು ಹಾರೈಸಿತು? ಈ ಲೋಕದ ಕಡೆ ಕವಿ ನಮ್ಮ ಗಮನ ಸೆಳೆಯುತ್ತಾರೆ. ಸಲಹುವುದರಲ್ಲಿ ಬೆಳೆಸುವುದರಲ್ಲಿ ಹೆಣ್ಣಿಗಿರುವ ತಾಯ್ತನವನ್ನೇ ಈ ಕವಿತೆ ಕಟ್ಟಿಕೊಡುತ್ತದೆ.

ಬೇರು ಕಾಣದ ಕಾಂಡ
ಮುಗಿಲ ಮುಟ್ಟಲು ಯತ್ನಿಸುತ್ತಿದೆ
ನೆಲದೊಳಗಿನ ಬೇರಿಗೆ
ಮೇಲಿನ ಮರ ಗೊತ್ತೋ ಇಲ್ಲವೋ
ನೆಲವನ್ನು ಸೀಳುತ್ತಲೇ ಇದೆ
ನೆಲ ಹೇಳದ ಸತ್ಯ
ಮುಗಿಲು ಹೇಳದ ಸತ್ಯದಲ್ಲಿ
ಮರವೊಂದು ಬದುಕುತ್ತಿದೆ

(ಮರವೊಂದು ಬದುಕುತ್ತಿದೆ)

ಆಧುನಿಕತೆಯ ವಿಸ್ತಾರದಲ್ಲಿ ಕೈಗಾರಿಕೆ, ನಿರ್ಮಾಣವಾಗುತ್ತಿರುವ ಡಾಬಾ, ಅಪಾರ್ಟ್‌ಮೆಂಟ್ಸ್, ಫಾರಂಗಳು ಭೂಮಿಯನ್ನೇ ಒತ್ತುವರಿ ಮಾಡಿಕೊಳ್ಳುತ್ತಿರುವ ಸಂದರ್ಭದಲ್ಲಿ ಸೀಳಿಕೊಳ್ಳುತ್ತಿರುವ ಪ್ರಜ್ಞೆ ನಾಗರಿಕ ಮನುಷ್ಯನಿಗೆ ಬಂದಂತಿಲ್ಲ ಅಥವಾ ಬೇಕಾಗಿಲ್ಲ. ಹೀಗಿದ್ದರೂ ಮುಂದೆ ಜರುಗುವ ಸತ್ಯವನ್ನು ಹೇಳದೆ ಮರವು ಬದುಕುತ್ತಿದೆ. ಮರದಂತೆಯೇ ಮನುಷ್ಯರು ಬದುಕುತ್ತಿರುವ ವರ್ತಮಾನವನ್ನು ಈ ಕವಿತೆ ಹೇಳುತ್ತದೆ.

ಇವುಗಳ ನಡುವೆಯೂ ಮನುಷ್ಯನೊಳಗಿನ ನಂಬಿಕೆಯನ್ನು ಆಧುನಿಕತೆ ಸವಲತ್ತುಗಳು ಅಲ್ಲಾಡಿಸಿರುವಂತೆ ಈ ಕವಿ ಬರೆಯುತ್ತಾರೆ. ಎಲ್ಲದಕ್ಕೂ ಪುರಾವೆಗಳನ್ನು, ಸಾಕ್ಷಿಗಳನ್ನು, ಬೇಡುವ ಮನಸ್ಸು ಹೆಚ್ಚಿಕೊಳ್ಳುತ್ತಿರುವ ಸೂಚನೆ ಈ ಕವಿಗೆ ಸಿಕ್ಕಿದೆ. ಗ್ಯಾರಂಟಿ ಕಾರ್ಡುಗಳ ಮೇಲೆ ಉಸಿರಾಡುತ್ತಿರುವ, ಉಸಿರಾಡಲು ಬಯಸುವ ಜನರ ಮಧ್ಯೆ ಕವಿಯ ಸ್ವಗತವು ಹೀಗಿದೆ;

ಎದೆಯ ಮೇಲಿಳಿದ ಕಣ್ಣೀರು ಎದೆಯೊಳಗಿಳಿದ ಪುರಾವೆಯಿಲ್ಲ
ಕಣ್ಣಿಲ್ಲದ ಕಣ್ಣೀರಿಗೆ ಕಡಲು ಗೊತ್ತಿಲ್ಲ
ಕಣ್ಣೀರ ಉಪ್ಪಿಗೆ ನದಿಯ ಕನಸಿಲ್ಲ (ಎದೆಯ ಜಾಡನು ಹುಡುಕಿ)

ಬದುಕು ಹೀಗಿದ್ದರೂ ಸಾಗುತ್ತಿದೆ, ಸಾಗುತ್ತಲೇ ಇದೆ ಎನ್ನುವ ಸತ್ಯವನ್ನು ಕವಿ ಕಾಣಿಸುವುದು ಹೀಗೆ;

ಮರಳ ಹೊತ್ತ ದೋಣಿಯಲ್ಲಿ ಯಾರೋ ಬರುತ್ತಿದ್ದಾರೆ
ಮರಳ ದಡದಲ್ಲಿ ನಿಂತ ಯಾರೋ ಕಾಯುತ್ತಿದ್ದಾರೆ

(ಯಾರ ಉಪ್ಪು ಹೇಳಿಕೊಳ್ಳುತ್ತಿದೆ ಕಥೆಯ)

**ಎಸ್.ಮಂಜುನಾಥ್** ಕಳೆದ ಮೂರು ದಶಕಗಳಿಂದಲೂ ಕಾವ್ಯದಲ್ಲಿ ಗಂಭೀರವಾಗಿ ತೊಡಗಿರುವ ಕವಿ. ಈತನಕ 'ಹಕ್ಕಿಪಲ್ಟಿ', 'ಬಾಹುಬಲಿ', 'ನಂದಬಟ್ಟಲು', 'ಮೌನದಮಣಿ', 'ಕಲ್ಲಪಾರಿವಾಳಗಳ ಬೇಟೆ', 'ಮಗಳು ಸೃಜಿಸಿದ ಸಮುದ್ರ' ಕವನ ಸಂಕಲನಗಳನ್ನು ಪ್ರಕಟಿಸಿರುವರು. ಕವಿತೆಯಲ್ಲಿ ಅರ್ಥಕ್ಕಿಂತ ಅನುಭವವೇ ಮುಖ್ಯ ಅದೊಂದು ಇಂದ್ರಿಯ ಅನುಭವ; ಆ ಮೂಲಕ ಒಂದು ಚಿತ್ರ ಪರಿಚಯವಾದದ್ದೇ ಲಾಭ ಎನ್ನುತ್ತದೆ ಇಂತಹ ಕಾವ್ಯದ ಹಾದಿ. ಪ್ರತಿ ಕ್ಷಣ ಇನ್ನೊಂದು ಕ್ಷಣಕ್ಕೆ ಎದುರಾಗುವ ಅನುಭಾವವೇ ಇಲ್ಲಿ ಮುಖ್ಯ.

ಸಂತಸದಲ್ಲಿರುವ ಮನುಷ್ಯನತ್ತ
ಬಿಡದೆ ಮುಗುಳ್ನಗಬೇಕು
ಹಾಡಿಗಾಗಿ ಹಾತೊರೆವವನ
ಬಳಿ ಹೋಗಿ ಹಾಡಬೇಕು
ಕವಿತೆಗಾಗಿ ಹಸಿದವನ ಬಾಗಿಲ
ನಡುರಾತ್ರಿಯಲ್ಲಿ ತಟ್ಟಬೇಕು

(ಕವಿ ಮಾತು: ಕಲ್ಲ ಪಾರಿವಾಳಗಳ ಬೇಟೆ)

ಮನುಷ್ಯ ದುಃಖವನ್ನೇ ಹೇಳದೆ ಕವಿತೆಯನ್ನಷ್ಟೇ ನೆಚ್ಚಿಕೊಂಡಿರುವ ಈ ಕವಿಯ ಕವಿತೆಗಳು ನಮ್ಮ ಕಾಲದ ಭಿನ್ನ ಮತವಾಗಿಯೇ ತೋರುತ್ತದೆ. ಭಿನ್ನಮತ ಎಂದು ಏಕೆ ಹೇಳಬೇಕಾಗಿದೆ ಎಂದರೆ; ಈ ಕಾವ್ಯದ ಹಾದಿ ಸಮಾಜವನ್ನು ಮುಟ್ಟುವುದಿಲ್ಲ. ಸ್ವ ಲೋಲುಪತೆಯೇ ಜೀವಾಳ ಎಂದುಕೊಂಡಿರುವ ಕಾವ್ಯಧರ್ಮವನ್ನು ಇಲ್ಲಿ ಕಾಣಬಹುದು.

ಕ್ರಾಂತಿಯಾಗಲೀ ದುರಂತ ಪ್ರೇಮವಾಗಲೀ
ಆಗಲಿಲ್ಲ ನನ್ನ ಬದುಕಲ್ಲಿ
ನನ್ನ ಬದುಕೊಂದು ಸಮಾನ್ಯ ಚಿತ್ರ;
ಕಂದು ಗುಡ್ಡಗಳು
ಇದಿರು ತಿಳಿನೀರ ಕೆರೆ
ಬಳಸಿ ಸಾಗಿ ಕಾಣದಾಗುವ ಹಾದಿ
ಇದನ್ನೆಲ್ಲ ತುಂಬಿರುವ ಸರಳ ನಿರ್ಭಯ ಶಾಂತಿ
ಬೇಕೆಂದರೆ ಅದನ್ನಷ್ಟೇ ಹಂಚಿಕೊಂಡೇನು
ನಿಮ್ಮೊಡನೆ ನಾನು (ನನ್ನ ಬದುಕು)

...........ಏನಾದರೂ ಆಗಬೇಕೇಕೆ

ಹಕ್ಕಿಪಲ್ಲಿಯಂಥ ಘಟನೆಗಳ ಗಮನಿಸಲು ಶಕ್ಯವಿದ್ದರೆ ಸಾಲದೆ,
ಇನ್ನುಳಿದಂತೆ ನಾವು ಆಗಲೆಳಸುವುದೆಲ್ಲ ಜಗಮೆಚ್ಚುಗೆಗಲ್ಲವೆ?
(ಹಕ್ಕಿಪಲ್ಲಿ)

ಇದು ಕವಿಯ ಬಲವಾದ ನಂಬುಗೆ ಮತ್ತು ಕಾವ್ಯದ ಹಾದಿ. ತನ್ನ ಇಂದ್ರಿಯಕ್ಕೆ ದಕ್ಕುವುದನ್ನೇ ಕಾವ್ಯದಲ್ಲಿ ತರುವ ಮನಸ್ಸು ಈ ಕವಿಯದು.

ಮಗುವೇ
ಎದೆಯೊಳಗೊಂದು ಹೂವಿಟ್ಟು ಹೋದೆ
ಗೆಜ್ಜೆ ಕಾಲಿಂದ
ಒದ್ದೂ ಒದ್ದೂ
ಕಲ್ಲ ಮಿದುಗೊಳಿಸಿದೆ
ನಿನ್ನನ್ನು ಅಪ್ಪಿ ಆಡಿಸಿ ತೂಗಿ
ಹಸುಳೆಯಂತೆ ಹೊಸತಾದವು
ಈ ನನ್ನ ಇಂದ್ರಿಯಗಳು (ಮಗು)

ತಾಯಿಯಂತಹ ನೆಲ ತಂದೆಯಂತಹ ಸೂರು ಅಣ್ಣನಂತಹ ಗೊಡೆಗಳ ಮನೆಯೇ
ನಿನ್ನ ಮಡಿಲಲ್ಲಿ ಉಂಡ ಉಣಿಸುಗಳ ರುಚಿ ಪಡೆದ ನಿದ್ರೆಯ ಸುಖ
ನಕ್ಕು ನಗೆ ಆಲಿಸಿದ ನುಡಿ ಹಾಡು ಬಗೆದ ಭಾವಗಳ ನಿಧಿಯೆಲ್ಲವನು
ಕಳಿಸುವೆಯ ಈಗ ಹೊಸ ಬಿಡಾರಕೆ ನಮ್ಮೊಂದಿಗೇ
(ಹೊಸ ಬಿಡಾರಕೆ ಬಂದು)

ನಡುರಾತ್ರಿ ಕೊಠಡಿಯೊಳಗೆ
ಏನೋ ಬಿದ್ದಿತ್ತು
ಬಗ್ಗಿ ಎತ್ತಲು ಹೋದರೆ ಬೆಳಕು (ಬೆಳಕು – ಚಿಟ್ಟೆ)

ಅತ್ತದ್ದು ಅವಮಾನವಲ್ಲ
ಅಳು ಅವಮಾನವಾದರೆ
ಲೋಕಕ್ಕೆ ಮೋಕ್ಷವೇ ಇಲ್ಲ (ಕವಿತೆ: ಅಳು)

ಈ ಹಣ್ಣು ಯಾಕಿಷ್ಟು ಸಿಹಿಯಾಗಿದೆ
ಇದರ ಹಿಂದೆ ಯಾರೋ ಅತ್ತಿದ್ದಾರೆ

ಕಣ್ಣ ಹನಿ ಹನಿ ಜಿನುಗಿ ಕಣಕಣದ
ಒಗರು ಹುಳಿಯನ್ನೆಲ್ಲ ಬದಲಿಸಿದೆ (ಕಂಬನಿಯ ಅರ್ಥ)

ಕಣ್ಣು ಜಗವ ಕಿರಿದಾಗಿಸಿದಂದು
ಬೆಟ್ಟ ಜಾರಿ ಹೋಗುವುದು
ರೂಢಿ ನೋಟವನು ಬರಿದಾಗಿಸಿದಂದು
ಸಾಲು ಸವೆದಂತಾಗುವುದು (ಬೆಟ್ಟಸಾಲು)

ಬೆಳ್ಳಕ್ಕಿಗಳಿಗೆ ಹುಟ್ಟಿಲ್ಲ ಗಂಟಿಕ್ಕಲು
ಗುಳಿಕಣ್ಣುಗಳಲ್ಲಿ ಕರಗಿದ ಚಿಂತೆ ಕಾಣಬರದು
ತೇಲುತ್ತ ಬರುವಾಗ ನಿಧಾನ ತಂಪಾದ ಬಾನಲ್ಲಿ
ಮುಂಜಾನೆ ನದಿಯ ತೆರೆಯಂತೆ ಅವುಗಳ ಸಾಲು (ನದಿ, ಹಕ್ಕಿ)

ಬಿಳುಪು ಪಿಂಗಾಣಿ ತಟ್ಟೆಯಲ್ಲಿ
ಮಲ್ಲಿಗೆಯಂತೆ ಅರಳಿದ ಅನ್ನದಲ್ಲಿ
ಸಿಕ್ಕುವುದೊಂದು ಕೂದಲು
ಅದಿರುವುದೇ ಹಾಗೆ
ಯಾವೊಂದು ಕ್ಷಣವೂ
ಮುಕ್ಕಾಗದೆ ಸಿಕ್ಕದು ('ಆಧ್ಯಾತ್ಮಿಕ' ಪದ್ಯಗಳು)

ಇವೆಲ್ಲವೂ ಎಸ್.ಮಂಜುನಾಥ್‌ರ ದೃಷ್ಟಿಯಲ್ಲಿ ಕಾವ್ಯವೆಂದರೆ ಏನೆಂಬುದನ್ನೆ ಹೇಳುತ್ತಿವೆ. ಅಲಂಕಾರ, ಪ್ರತಿಮೆ, ಮೊದಲಾದ ಕಾವ್ಯ ಪರಿಕರಕ್ಕಿಂತ ಕಾಣುವ ಸೃಜನಶೀಲತೆಯೇ ಮಂಜುನಾಥರ ಕಾವ್ಯದ ದ್ರವ್ಯವಾಗಿದೆ. ಹಾಗಾಗಿ 'ನನಗೆ ಹೀಗೆ ಅನ್ನಿಸುತ್ತಿದೆ', 'ಹೀಗೆ ಕಾಣುತ್ತಿದೆ', ಎನ್ನುವುದನ್ನೆ ಕವಿತೆಯಾಗಿಸುವ ಕಲಾವಂತಿಕೆ ಈ ಕವಿಗೆ ಸಿದ್ಧಿಸಿದೆ. ಆದ್ದರಿಂದಲೇ ಏನಾದರೂ ಆಗುವುದನ್ನು ಒಪ್ಪದೆ ಹಕ್ಕಿಪಲ್ಲಿಯನ್ನು ಆ ಮೂಲಕ ದೊರಕಿದ ಅದೃಷ್ಟಕ್ಕೆ ತೃಪ್ತನಾಗುವೆ ಎನ್ನುತ್ತಾನೆ ಕವಿ. ಅಳು ಕೂಡ ನಮ್ಮ ಶಾಪ ವಿಮೋಚನೆಗಾಗಿಯೇ ಇರುವಂಥದ್ದು ಎನ್ನುವ ಅನಿಸಿಕೆ ಮೂಡುತ್ತದೆ. ಹಣ್ಣು ರುಚಿಯಾಗಿರುವುದರ ಹಿಂದೆ ಯಾರದೋ ಅಳುವನ್ನು ನೆನಪು ಮಾಡಿಕೊಡುವ ಕವಿ ಮನುಷ್ಯ ಮಾಗುವಿಕೆಯನ್ನೇ ಕುರಿತು ಹೇಳುತ್ತದೆ.

ಕಣ್ಣು ಎಲ್ಲವನ್ನೂ ತುಂಬಿಕೊಳ್ಳಬೇಕೆಂಬುವ ಹಂಬಲ ಈ ಕವಿಯಲ್ಲಿ ದಟ್ಟವಾಗಿದ್ದು, ಬೆಳ್ಳಕ್ಕಿಗಳಿಗೆ ಹುಬ್ಬಿಲ್ಲ ಎನ್ನುವುದನ್ನು ಓದುಗರಿಗೆ ಕಾಣಿಸುವ ತಾಳ್ಮೆಯೂ ಇದೆ.

ದೈನಿಕ ಬದುಕಿನಲ್ಲಿ ಮನುಷ್ಯನ ಕ್ರಿಯೆ-ಪ್ರಕ್ರಿಯೆಗಳು, ಸೋಲು-ಗೆಲುವು, ದುಃಖ-ಸಂತೋಷ, ಲಾಭ-ನಷ್ಟ, ಆಗುತ್ತಲೇ ಇರುವಂಥದ್ದು ಈ ಪ್ರಕ್ರಿಯೆಯನ್ನೇ ಕವಿ ಸಹಜಗುಣ ಎಂದು ಒಪ್ಪಿಕೊಂಡು ಸಮಾಧಾನವಾಗುತ್ತಾರೆ.

ಈಗ ಬರೆಯುತ್ತಿರುವ ಕವಿಗಳಲ್ಲಿ ಭಿನ್ನರಾಗಿಯೇ ಎದ್ದು ಕಾಣುವ ಕವಿ ಎಸ್.ಮಂಜುನಾಥ್‌ರ ಕಾವ್ಯ ಲೋಲುಪತೆಯ ಆಚೆಗೆ ಸಮಾಜವನ್ನು ಮನಸ್ಸಿಗೆ ತಂದುಕೊಳ್ಳುವುದೇ? ಎನ್ನುವ ಪ್ರಶ್ನೆ ಅವರ ಈತನಕದ ಕವಿತೆಗಳನ್ನು ಓದಿದ ಮೇಲೆ ಹುಟ್ಟುತ್ತದೆ.

ಸದ್ಯ ಎಸ್.ಮಂಜುನಾಥರ ಕಾವ್ಯದ ಹಾದಿಯಲ್ಲಿಯೇ ನಡೆದಿರುವ ಕವಿ **ನಾ.ಮೊಗಸಾಲೆ**. ಈ ಹಿಂದೆ 'ವರ್ತಮಾನದ ಮುಖಗಳು', 'ಪಲ್ಲವಿ', 'ಪ್ರಭವ', 'ಸ್ವಂತಕ್ಕೆ ಸ್ವಂತಾವತಾರ', 'ನೆಲದ ನೆರಳು', ಕವನ ಸಂಕಲನಗಳಲ್ಲಿ ನವ್ಯ, ನವ್ಯೋತ್ತರದ ಪ್ರಭಾವದಲ್ಲಿ ಬರೆಯುತ್ತಿದ್ದ ಕವಿ 'ಇದಲ್ಲ ಇದಲ್ಲ', 'ಇಹಪರದಕೊಳ' ಸಂಕಲನದಿಂದ ತಮ್ಮ ಕಾವ್ಯದ ಹಾದಿಯನ್ನು ಬದಲಿಸಿಕೊಂಡು ಎಸ್.ಮಂಜುನಾಥ್‌ರ ಕಾವ್ಯ ಮಾರ್ಗವನ್ನು ಹಿಡಿದಿದ್ದಾರೆ. ಈ ಹಿನ್ನೆಲೆಯಲ್ಲಿ ನೋಡಿದಾಗ ನಾ.ಮೊಗಸಾಲೆ ಓರ್ವ 'ಕಲಿತಕವಿ'ಯಾಗಿಯೇ ಕಂಡುಬರುತ್ತಾರೆ.

ನಕ್ಕಂತೆ ಕಂಡರೂ
ನಗಲಾರದು ಹೂವು
ಆದರೆ, ಚಿಟ್ಟೆ ಬಂದು ಕುಳಿತು
ಮತ್ತೆ ಮೇಲೇಳುವಾಗ
ದಳಬಿರಿದು ದೊಡ್ಡದಾಗಿ ನಕ್ಕು
ನಗದೇ ಬೀಳ್ಕೊಡುವುದು

(ಚಿಟ್ಟೆಯಿಂದ ಕಡ ತಂದ ರೆಕ್ಕೆಗಳು)

ಕಾಡೇ ಕರುಣೆಯಿಂದ ಕಳುಹಿಸಿದ ಹಾಗಿರುವ
ಈ ಬಿದಿರು ತುಂಡು
ನಾಡಿಗೆ ಬಂದು ಕೊಳಲಾಗಿದೆ.
ಕೋಗಿಲೆ ಮತ್ತು ನವಿಲುಗಳ ಜೊತೆಗೇ
ಬಗೆಬಗೆಯ ಕಾಡಿನೆಲ್ಲ ಹೂಗಳೂ ಬಂದು
ಸ್ವರಗಳಾದಂತಿವೆ ಕೊಳಲಿನಲ್ಲಿ
ನುಡಿಸಿದರೂ ನುಡಿಸದಿದ್ದರೂ
ಬಿದಿರ ತುಂಡೊಂದನ್ನು ಒಪ್ಪಿಕೊಂಡ ಮೇಲೆ ಕೊಳಲೆಂದು

ತಿರಸ್ಕರಿಸಿದರೂ ನಾನು
ಅದು ಬಿದಿರಾಗದು (ಒಪ್ಪಿಕೊಳ್ಳುವುದು)

ಎಲ್ಲ ಹೆಣ್ಮಕ್ಕಳ ನೋವು ಕ್ರೋಧವಾಗಿ
ಇವಳ ಕಣ್ಣುಗಳಾದಂತಿವೆ
ಗಂಡಸರ ಕ್ರೌರ್ಯದ ಬೆಟ್ಟವನ್ನು
ತುಳಿದೂ ತುಳಿಯಲಾರದೇ
ಪ್ರಾಣಿ ಬಲಿಯಲ್ಲಿ
ಇವಳು ನಾಲಗೆ ತಣಿಸಿಕೊಂಡಂತಿದೆ
ನೋಡಿ ಆದರೂ ಅವಳ ಎದೆಯಲ್ಲಿ
ಹೆಣ್ತನ ಹೇಗೆ ಮೇಲೆದ್ದಿದೆ

(ಮಾರಮ್ಮ)

ಒಣಗಿ ಹೋಗಿರುವ ಈ ಮರ
ಹೇಳಬೇಕೆಂದಿದ್ದುದನ್ನು ಹೇಳಿ
ಆ ಮೇಲೆ ಒರಗುವೆ ಧರೆಗೆನ್ನುವಂತೆ
ಎದುರಾಗಿದೆ.

(ಒಣಗಿ ಹೋಗಿರುವ)

ಇಲ್ಲಿನ ಚಿಟ್ಟೆ, ರೆಕ್ಕೆಗಳು, ಕೊಳಲು, ಒಣಗಿರುವ ಮರ ಈ ಪ್ರತಿಮೆಗಳು ಮನುಷ್ಯನನ್ನೇ ಕುರಿತು ಮಾತನಾಡುತ್ತಿವೆ. ನಮಗೆ ಒದಗಿ ಬಂದಿರುವ ಬದುಕೇ ಒಂದು ಕೊಳಲು, ಅದನ್ನು ಇಟ್ಟುಕೊಳ್ಳಲಿ, ಬಿಡಲಿ ಬದುಕು ಬದುಕಾಗಿಯಷ್ಟೆ ತನ್ನ ಅಸ್ತಿತ್ವವನ್ನು ಇರಿಸಿಕೊಂಡಿರುತ್ತದೆ. ಮಾರಮ್ಮನ ಬದುಕಿನ ಹಿಂದೆ ಹಲವು ಸಂಕಥನಗಳೇ ಇವೆ; ಹುಟ್ಟಿಕೊಂಡಿವೆ. ಕವಿ ಕೊಡುವ ಮಾರಮ್ಮನ ಚಿತ್ರ ಕೂಡ ಒಂದು ಸಂಕಥನ ಸ್ವರೂಪದಲ್ಲಿಯೇ ಕವಿತೆಯಾಗಿದೆ. ನಮಗೆ ಎದುರಾಗುವ ಕ್ಷಣ ಸಂಭವಿಸಿಯೇ ತೀರುವಂತೆ ಇಲ್ಲಿನ ಒಣಗಿದ ಮರವಿದೆ ಅದರ ಕಾಣ್ಕೆ ಇದೆ.

## ಅಧ್ಯಾಯ – ೨

## ಹೆಜ್ಜೆ ಊರುತ್ತಿರುವ ಕವಿಗಳು – ಕವಿತೆಗಳು

ಕಳೆದ ಒಂದೂವರೆ ದಶಕದಿಂದಲೂ ಕಾವ್ಯವನ್ನು ಗಂಭೀರವಾಗಿ ತೆಗೆದುಕೊಂಡಿರುವವರಲ್ಲಿ **ಕೆ.ಪಿ.ಮೃತ್ಯುಂಜಯ** ಒಬ್ಬರು. 'ಒಂದು ಅನುರಾಗಕ್ಕಾಗಿ ಎಷ್ಟೆಲ್ಲಾ', 'ಮರ್ತ್ಯ ಮೀರಿದ ಮಾತು', 'ಎಲೆ ಎಸೆದ ಮರ', 'ಅವರವರ ಸಾವು' ಕವನ ಸಂಕಲನಗಳನ್ನು ಪ್ರಕಟಿಸಿರುವ ಇವರ ಕಾವ್ಯದಲ್ಲಿ ತಳ ಸಮುದಾಯದ ಸಂಕಟವು ಸೇರಿದಂತೆ ಸಾವು ಮತ್ತು ಸಮಕಾಲೀನವಾದ ದುಃಖ ಪ್ರಧಾನವಾಗಿ ಕಾಣಿಸುತ್ತದೆ.

ನಾನು ಮರ
ನನಗೆ ಭೂತಕಾಲದ ಗಟ್ಟಿ ಬೇರಿದೆ
ಪಾತಾಳದ ತನಗೆ ಇಳಿದಿದೆ
ಅನುಭವಿಸಿದ ನೋವಿನೊಂದಿಗೆ (ನಾನು ಮರ)

ಕವಿಯ ಬೆನ್ನಿಗಿರುವ ಭೂತದಲ್ಲಿ ತಳವರ್ಗದ ನೋವು, ಅವಮಾನ ಬೆರೆತುಹೋಗಿದೆ.

ರಂಗನಾಥಸ್ವಾಮಿಗೆ ಬಂಗಾರದ ಕಿರೀಟಬೇಕು;
ಛತ್ರಿ ಬೇಕು
ಇವ ಮಾತ್ರ ಬ್ಯಾಡ
ಇವನು ಸತ್ತಾಗ
'ಬಿರ್ನೆ ಊರಾಚೆ ತಗೊಂಡು ಹೋಗಿ
ಒಪ್ಪ ಮಾಡ್ರಿ!' ಅಂತ ಗದರ್ತಾರೆ
ಯಪ್ಪಾ ಬೇಡಿಕೊಂಡರೂ ಸಿಗದು ಸಿದಿಗಿ
ಬೊಂಬು ಇವನ ಶವಾನ ನೋಡೋಕೂ ಬರದೆ
ಸೂಳೆಮನೆ ಜಗುಲಿ ಮೆಲೆ ಮೂಗುಬೊಟ್ಟು
ಹಿಡಿದು ಕೂರ್ತಾನೆ ಹಾರವ; ಇವನಿಗೊಂದು
ಹಿಡಿ ಮಣ್ಣಾಕೋಕೂ ಬರದೆ ನೇಗಿಲು
ಹೊತ್ಕೊಂಡು ಹೊರಡ್ತಾನೆ ಒಕ್ಕಲು ಮಗ (ಜಕ್ಕಣರು)

ವರ್ಣ ಸಂಘರ್ಷಕ್ಕೆ ಸಿಲುಕಿ ನಲುಗಿರುವ ದಮನಿತ ಧ್ವನಿಯೊಂದು ಇಲ್ಲಿ ಅನುರಣಿಸುತ್ತದೆ. ಮುಖ್ಯವಾಗಿ ರಾಜಕೀಯಪ್ರಜ್ಞೆಯೊಂದು ಜಾಗೃತವಾಗಿರುವ ಸ್ಪಷ್ಟ ಕುರುಹು ಇಂತಹ ಕವಿತೆಯಲ್ಲಿ ಕಾಣಬಹುದು. ಬದುಕಿನ ಪಡಸಾಲೆಯಲ್ಲಿ ಹೊರ

ಹೊಮ್ಮಿದ ಮೃತ್ಯುಂಜಯರವರ ಕವಿತೆಗಳು ಅವರ ಸೃಜನಶೀಲ ಹುಡುಕಾಟದ ಮಾರ್ಗವೂ ಆಗಿದೆ.

ಕಾದು ಕಾಯಲಾಗದೆ ಕಾದು ಕುದಿದು ಕುದಿಯಲಾಗದೆ ಕುದಿದು
ಬಾಗಿ ಬೆಂಬಲ ಮಾಗಿ ಮಮ್ಮಲ ಇಳಿಬಿದ್ದು
ಇಳೆಗೆ ಸಾವರಿಸಿ ಮತ್ತೆದ್ದು ಮೇಲೆ ಅಂತರಿಕ್ಷದ ಪಕ್ಷಿಯಾಗಿ
ಸುಳಿ ಸುಳಿ ಸುತ್ತಿ ಮತ್ತೆ ಬೇರಾಗಿ
ಒಂದು ಅನುರಾಗಕ್ಕಾಗಿ . . . . . . . .

(ಒಂದು ಅನುರಾಗಕ್ಕಾಗಿ ಎಷ್ಟೆಲ್ಲ)

ಏನೆಲ್ಲ ಸಾಧನೆ ಹುಡುಕಾಟದ ನಡುವೆಯೂ ಈ ಬದುಕಿನ ನಿರಂತರ ಹಂಬಲ, ಅರಸುವಿಕೆ ಮನುಷ್ಯ ಪ್ರೀತಿಯೇ ಆಗಿದೆ ಎನ್ನುವುದು ಈ ಕವಿಯ ಬಲವಾದ ನಂಬಿಕೆ. ಇದರ ಜೊತೆಗೆ ಇವರ ಕಾವ್ಯದ ಪ್ರಧಾನ ವಸ್ತುವಾಗಿ 'ಸಾವು' ಮೇಲಿಂದ ಮೇಲೆ ಕಾಣಿಸಿಕೊಳ್ಳುತ್ತದೆ.

ಕವಿ ಜೀವನಕ್ಕೆ ಮಂಜೂರು ಮಾಡುವುದೇನೆಂದರೆ,

ಏನು ಮಾರಿ ಏನು ಕೊಳ್ಳುವಿರಿ
ಸಂತೆಯಲ್ಲಿ; ಮರೆಯದೆ ಸೇರು ಪುರಿ
ಹೂ ಸಿಕ್ಕರೆ ಕೊಳ್ಳಿರಿ
ಮಾರು ಮಾರು ಮಾರು (ಎಲ್ಲರೂ ಹೊರಟಾಯಿತು)

ಮನುಷ್ಯ ಕಟ್ಟ ಕಡೆಗೆ ಸೇರಬೇಕಾದ
ದಡ– ದುಃಖ ಮಾತ್ರವೇ
ಒಮ್ಮೊಮ್ಮೆ ಅದನು ಸುಖವೆನ್ನುವುದು ಲೋಕ

(ದುಃಖ ಮಾತ್ರವೇ)

ಸತ್ತವರ ಜತೆ ಯಾರು ಸಾಯುತ್ತಾರೆ
ಹೊತ್ತವರು ಇಳಿಸಿ ವಾಪಾಸು ಬರುತ್ತಾರೆ
ದೈನೇಸಿ ಮನುಷ್ಯನ ಅಣಕಿಸಲು ಸೂರ್ಯ ಚಂದ್ರರು ಬರುತ್ತಾರೆ

(ಸತ್ತವರ ಜತೆ)

ಗಾಳಿಯಲ್ಲಿ ನೀರಿನಲ್ಲಿ ಬೆಳಕಿನಲ್ಲಿ
ಯಾವುದೋ ಗೀತವಿದೆ

ಕೆಂಡ ಸಂಪಗೆಯೋ ಕೆಂಪು ಕಣಗಿಲೆಯೋ ಕಾಣೆ
ಅದು ದುಃಖಗೀತ ಅನ್ನುತ್ತಿದೆ (ದುಃಖಗೀತ)

ಇಂತಹ ಕವಿತೆಗಳು ಒಟ್ಟಂದದಲ್ಲಿ ಸಾವಿಲ್ಲದ ಮನೆಯಲ್ಲಿ ಸಾಸುವೆ ತರಲು ಹೊರಟ ಕಿಸಾಗೋತಮಿಯ ಸಂಕಟದ ಸೊಲ್ಲಿನಂತೆಯೇ ಕಾಣಿಸುತ್ತದೆ.

ಎಲೆ ಹೆಗಲ ಮೇಲೆ ಬೀಳುತ್ತೆ
ಹೆಗಲು ತೊಡೆ ಮೇಲೆ ಒರಗುತ್ತೆ
ತೊಡೆ ಕುಸಿದು ಹೆಜ್ಜೆ ಮೇಲೆ
ಹೆಜ್ಜೆಯೆಂಬುದು ಹಿಸಿದು ನೆಲವನ್ನೆ!
ಹೊಕ್ಕಂಬಿಡುತ್ತೆ
ಎಲೆ ಎಸೆದ ಮರ
ಕಣ್ಣೊಳಗಿದೆ
ಮುಚ್ಚಿದರೆ ಕತ್ತಲು
ಬಿಟ್ಟರೆ ನೆರಳು (ಎಲೆ ಎಸೆದ ಮರ)

ಕಡಿಮೆ ಸಾಲುಗಳಲ್ಲಿ ಬದುಕಿನ ಅವಸ್ಥೆಗಳನ್ನು, ಎಲೆಯ ರೂಪಕದಲ್ಲಿ ಸಾವನ್ನು ಹಿಡಿದಿಟ್ಟಿರುವ ಕವಿ ಪ್ರತಿಭೆಗೆ ಎಲೆ ಎಸೆದ ಮರ ಕವಿತೆ ಉತ್ತಮ ಉದಾಹರಣೆ.

ಸಾವಿನ ಮನೆಯೊಂದನ್ನು ಹೊಕ್ಕಂತೆ ಭಾಸವಾಗುವ ಮೃತ್ಯುಂಜಯರ ಕವಿತೆಗಳನ್ನು ಓದುವಾಗ, ಸಾವನ್ನು ಹಚ್ಚಿಕೊಂಡು ಬರೆದ ಮತ್ತೋರ್ವ ಕವಿ ಗಂಗಾಧರ ಚಿತ್ತಾಲರು ನೆನಪಾಗುತ್ತಾರೆ. ಸಾವಿನಂತಹ ಅನುಭವವನ್ನು ಹೊರಗಿನಿಂದ ಮಾತ್ರ ನೋಡಲು ಸಾಧ್ಯವಿರುವಾಗ ಅದು ಹೊರಗಿರುವವರ ನೋಟವಾಗಿ ಮಾತ್ರ ಕಾಣಿಸಿಕೊಳ್ಳದೆ ಸಾಕ್ಷಿಭಾವದಂತೆ ಇವರ ಕವಿತೆಗಳಲ್ಲಿ ತೋರುತ್ತದೆ. ಸಮಕಾಲೀನವಾಗಿ ಹೆಚ್ಚುತ್ತಿರುವ ಹಿಂಸೆಯ ವಸ್ತುವನ್ನು ಇವರ ಈಚಿನ ಕವಿತೆಗಳು ನಿರ್ವಹಿಸಿದೆ.

ಎದುರಾ– ಬದುರಾ
ಹಿಂಸೆಯ ಕೈಯಿ
ಚಾಚುತ್ತಿವೆ
ನಡುವೆ
ಪ್ರಶಾಂತ ಮಗು
ತಲೆಯೆತ್ತಿದೆ

(ಹಿಂಸೆಯ ಕೈಯಿ ಚಾಚುತ್ತಿದೆ)

ಒಂದು ಚಂದ್ರ
ಮಗ್ಗಲಲ್ಲಿ ಒಂದು ಚುಕ್ಕೆ
ಅದೇನು ಸೊಗಸು!
ಆದರೆ 'ಶತ್ರುರಾಷ್ಟ್ರ'ದ ಭಾವುಟದಲ್ಲಿದೆಯಂತೆ
ಏನು ಮಾಡಲಿ!? (ಅಮರ್ತ್ಯ ಸಿದ್ಧಾರ್ಥನಿಗೆ)

ಇಸ್ಲಾಂ ಭಾಂದವರ ಸಂಕೇತ ಕವಿಗೆ ಒಂದು ಸೊಗಸಾಗಿ ಕಂಡರೆ, ಅದೇ ಸಂಕೇತ ಸಮಕಾಲೀನತೆಯೊಳಗೆ ಶತ್ರುರಾಷ್ಟ್ರದ ದ್ಯೋತಕವಾಗಿ ಬಿಂಬಿಸಿರುವ ಪ್ರಶ್ನೆ ಮಿಶ್ರಿತ ಆಶ್ಚರ್ಯ ಕವಿಯ ಎದೆಯನ್ನು ಕಲಕಿದೆ.

ಈ ಕಣ್ಣಿಗೆ ಹೂವು
ತೋರಿಸಿದ ಬೆಳಕಿಗೆ
ಈ ಮನಸಿನ ನೋವು
ಮರೆಸಿದ ಗಾಳಿಗೆ
ಈ ಹೃದಯದ ಬೆಂಕಿ
ಆರಿಸಿದ ನೀರಿಗೆ
ಕೈ ಮುಗಿಯುವೆ (ನಮನ)

ಕಡೆಗೂ ಅನುರಾಗ, ಸಾವು, ದುಃಖವನ್ನು ಭರಿಸಲು ಪ್ರಕೃತಿ ಮತ್ತು ಕವಿತೆಯೇ ಹೆಗಲಾಗಿರುವ ದರ್ಶನವನ್ನು ನಾವಿಲ್ಲಿ ಕಾಣಬಹುದು.

ಮತ್ತೋರ್ವ ತಳಸಮುದಾಯದ ಅಕ್ಷರಸ್ಥ ಕವಿ **ಆಲೂರು ದೊಡ್ಡನಿಂಗಪ್ಪ** 'ನೇಕಾರ' ಕವನ ಸಂಕಲನವನ್ನು ಈ ಕವಿ ಪ್ರಕಟಿಸಿದ್ದು; ಬಿಡಿ ಕವಿತೆಗಳು ಪತ್ರಿಕೆಗಳಲ್ಲಿ ಪ್ರಕಟಗೊಂಡಿದೆ.

. . . . . . . . .
ಸದ್ದಿಲ್ಲದೆ
ಈಡಿಗನೊಬ್ಬ ಈಚಲು ರೋಮ ಬೋಳಿಸಿ
ಹೊಕ್ಕಳು ಕೊರೆದು
ನಾಭಿ ಹಿಡಿದೆಳೆದು ಹೆಂಡ ಬಸಿಯುತ್ತಾನೆ
ನಾನು
ಸೊಗಡವರೆ ಇಳಿಸಿದ ಹೆಂಡ
ಕದಿಯಲಿಕ್ಕೆ

ಪೊದೆಗಳು ಕವಿದ ಕಾಲ್ದಾರಿಯಲಿ
ಹುಲಿ ಹೆಜ್ಜೆ ಹಾಕುತ್ತೇನೆ
. . . . . . . . . . .
ಓ ದೇವರೇ
ಭೂ ಮಾಲಿಕರಿಗೆ
ನನ್ನ ರಕುತದ ಗುರುತು ಸಿಗದಂತೆ ಅಳಿಸುವವರೆಗೆ
ಹೊಲದ ತುಂಬ ಬೆಳಕಾಗಬಾರದೆ (ಗುರುತು)

ಕಳ್ಳತನದಿಂದ ತನ್ನ ಜೀವನ ಸಾಗಿಸಬೇಕಾದ ಕಷ್ಟದ ಚಿತ್ರವನ್ನು ಕವಿ ಕಟ್ಟಿಕೊಡುತ್ತಿದ್ದಾನೆ. ಈ ಕವಿತೆಯ ಕಡೆಯಲ್ಲಿನ ಪ್ರಾರ್ಥನೆ ನಮ್ಮ ಕಾಲದ ಅಸಂಖ್ಯಾತ ದಮನಿತರದು ಆಗಿಬಿಡುತ್ತದೆ. ಕುಸುಮಬಾಲೆಯ ಗಾರೆಸಿದ್ಮಾವನ ಪಾತ್ರ ನೆನಪಾಗುತ್ತದೆ. ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ ಕಥೆಯ ರಂಗಪ್ಪನಂತಹ ತಲೆಮಾರಿನ ಸಂಕಟವನ್ನು ಇಂತಹ ಕವಿತೆ ವ್ಯಕ್ತಮಾಡುತ್ತದೆ. ಐಟಿ ಬಿಟಿ ಯುಗದಲ್ಲಿ ಇಂತಹ ಕವಿತೆಗಳ ಪಾತ್ರವೇನು ಎಂದು ಕೇಳುವವರೂ ನಮ್ಮ ನಡುವೆ ಹುಟ್ಟಿಕೊಳ್ಳುತ್ತಿದ್ದಾರೆ. ಆದರೆ ಒಂದು ಸಮುದಾಯದ ಕಚ್ಚಾ ಅಸ್ಮಿತೆಯನ್ನು ಈ ಮೂಲಕ ಅರಿಯಲು ಸಾಧ್ಯವಿದೆ. ಸಾಂಸ್ಕೃತಿಕ ನೆನಪುಗಳೇ ಅಳಿಸಿಹೋಗುತ್ತಿರುವ ಕಾಲಘಟ್ಟದಲ್ಲಿ ಇಂತಹ ನೆನಪುಗಳು ಆಯಾ ಸಮುದಾಯಕ್ಕೆ ಇದೀಗ ಆತ್ಮವಿಶ್ವಾಸವನ್ನೇ ತುಂಬುತ್ತಿರುತ್ತದೆ.

ನನ್ನ ಸುತ್ತ ಹೀಗೊಂದು
ರಂಗ ನಿರ್ಮಾಣವಾಗಿದೆ
ಪಾತ್ರಧಾರಿಗಳಿಗೆ ಬಣ್ಣ ಬಳಿದಿಲ್ಲ
ಪ್ರೇಕ್ಷಕರು ಕೂಗಾಡುತ್ತಿದ್ದಾರೆ
ಪಾತ್ರಕ್ಕೆ ತಂದಿದ್ದ ಹಂದಿ ಮರಿ
ಎದ್ದೋಡಿ ಹೇಲಿಗೆ ಮುಖವಿಕ್ಕಿದೆ
ನಾನೀನ ಹಿಡಿದು ಎದೆಗವಚಿ
ರಂಗದಲ್ಲಿ ನಿಂತಿದ್ದೇನೆ
ಎಲ್ಲಾ ಮೂಗು ಮುಚ್ಚಿದ್ದಾರೆ
ಯಾರೂ ಸತ್ತಿಲ್ಲ, ನೋಟ ಕೂಡ
ಈ ವಾಸನೆಯ ಜೊತೆ
ನಾನು ಚಲನೆಯಲ್ಲಿದ್ದೇನೆ (ಹೀಗೊಂದು)

ಬದುಕಿನ ರಂಗದಲ್ಲಿ ನಿಂತಿರುವ ಕವಿ 'ಹಂದಿ'ಯ ಮೂಲಕ ಕಟ್ಟಿರುವ ಸಾಮಾಜಿಕ ಚಿತ್ರವಿದು. ಒಂದು ನಾಟಕೀಯ ವಾತಾವರಣದಲ್ಲಿ ಸಮೂಹವೇ ಬಯಲಾಗುತ್ತಿರು-ವುದನ್ನು ನಾವಿಲ್ಲಿ ಕಾಣುತ್ತೇವೆ. ಲೋಕವಾಸನೆಯನ್ನು ಒಡಿದಿಡುವ ಕವಿ ಚಲನೆಯಲ್ಲಿರುವುದು ಸದ್ಯದ ಜೀವಂತಿಕೆಯಾಗಿರುವ ಮನುಷ್ಯನ ಲಕ್ಷಣವಾಗಿ ತೋರುತ್ತದೆ.

ಮನೆಯಂಗಳದಲ್ಲಿ ಗುಬ್ಬಿ
ಸ್ವರ ಎತ್ತಿದ್ದವು
ಹೊತ್ತು ಹುಟ್ಟೋ ಹೊತ್ತಿಗೆ
ರೈಲುಗಾಡಿ ಹಿಡಿಯಬೇಕಿತ್ತು
ಮತ್ತೊಂದು ಊರಿಗೆ
ಎಚ್ಚರಾಗಿ ಹೊರಳುವಂತಿಲ್ಲ
ಮಗನ ತೋಳು ಬಳ್ಳಿಯಾಗಿ
ತಬ್ಬಿದವು
ಬೆಡ್‌ಲ್ಯಾಂಪ್ ಬೆಳಕ ಉರಿ
ಕಪ್ಪು ಹಲಗೆಯ ಮೇಲೆ
ನಿನ್ನೆ ಮೂಡಿದ್ದ ಮಗನ ಅಕ್ಷರಗಳ
ಓದುತ್ತಿತ್ತು

(ಕಪ್ಪು ಹಲಗೆಯ ಮೇಲೆ....)

ಕೌಟುಂಬಿಕವಾದ ಒಂದು ಸಂದಿಗ್ಧ ಚಿತ್ರವನ್ನು ಕೊಡುವ ಕವಿ ರೈಲುಗಾಡಿ ಹಿಡಿಯಬೇಕಿರುವ ಜರೂರು, ಮಗುವಿನ ರೂಪದಲ್ಲಿರುವ ಜವಾಬ್ದಾರಿ ಮತ್ತು ಭರವಸೆ, ಅಕ್ಷರಗಳು ಕಾಣಿಸುವ ಭವಿಷ್ಯತ್ತು ಈ ಎಲ್ಲವನ್ನು ಒಟ್ಟಿಗೆ ಈ ಕವಿತೆ ಹೇಳುತ್ತದೆ. ವರ್ತಮಾನದಲ್ಲಿ ತಲೆ ಎತ್ತಿರುವ ಪ್ರಭುತ್ವದ ಕೇಡನ್ನು ಈ ಕವಿ ಕವಿತೆಗಳಲ್ಲಿ ಸಮರ್ಥವಾಗಿ ಮಂಡಿಸುತ್ತಾರೆ.

ಸಂತನೊಬ್ಬ ತನ್ನ ಕೈಗಳಿಂದ
ಗಡ್ಡ ನೀವಿ ನೀವಿ
ಉರಿವ ಸೂರ್ಯನ ಕಣ್ಣಿಗೆ
ತುಂಬಿಕೊಳ್ಳುತ್ತಾನೆ

ಭಕ್ತರಿಗೆ ಭಂಟರಿಗೆ ಭಯ ಭೀತಿ
ಉರಿವ ದೃಷ್ಟಿ ಯಾರ ಮೇಲೋ
ಸಂತನ ಗಡ್ಡ ಮೀಸೆಗಳ ಮೇಲೆ
ಹೇನುಗಳು ಮಾತ್ರ
ನಿರ್ಭೀತಿಯಲಿ ಸಂಸಾರ ನಡೆಸುತ್ತಿವೆ

(ಸಂತ ಮತ್ತು ಗಡ್ಡ)

ನಿದ್ರೆಯಿಲ್ಲದ ಎಲ್ಲಾ ದೇಶಗಳದ್ದು
ಒಂದೇ ದುಃಖ
ನಾಳೆಗಾದರೂ ಆಗದೇ ಇರುಳು
ತಪಸ್ವಿಗಳು ಹೀಗೆ ತಣ್ಣಗೆ
ಹಗಲಲ್ಲೇ ನಿದ್ರೆಯ ಧ್ಯಾನದಲ್ಲಿದ್ದಾರೆ
ಪುಂಡರು ಉಢಾಳರದ್ದು ಬೇರೆಯದೇ ಖಯಾಲಿ
ಜೀವವನ್ನೇ ಉಢಾಯಿಸಲು ತರಬೇತಿಯಲ್ಲಿದ್ದಾರೆ

(ಒಂದೇ ದುಃಖ)

ಹೀಗೆ ವ್ಯಂಗ್ಯ, ವಿಡಂಬನೆಯ ಮೂಲಕ ಸಂತರ ಬೂಟಾಟಿಕೆಯನ್ನು, ಈ ಕಾಲದ ಹಿಂಸೆ ಎನ್ನುವ ಶತ್ರು ಕುರಿತು ಕವಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

'ತಮಾಷ' ಮತ್ತು 'ಗೂಡುಕಟ್ಟುವ ಚಿತ್ರ' ಕವನ ಸಂಕಲನಗಳನ್ನು ಕವಿ **ವಿಕ್ರಮ ವಿಸಾಜಿ** ಪ್ರಕಟಿಸಿರುವರು. ಇವರ 'ಗೂಡು ಕಟ್ಟುವ ಚಿತ್ರ' ಇಪ್ಪತ್ತೊಂದನೇ ಶತಮಾನದ ಹಲವು ಬಿಕ್ಕಟ್ಟುಗಳನ್ನು ನಿರೂಪಿಸುತ್ತದೆ. ಸದ್ಯದಲ್ಲಿ ನಾವು ಕೂಡಿ ಕಟ್ಟಿಕೊಳ್ಳಬೇಕಾದ ಒಂದು ಪ್ರತಿಮೆಯಾಗಿ 'ಗೂಡುಕಟ್ಟುವ ಚಿತ್ರ'ವಿದೆ. ಇಲ್ಲಿನ ಕವಿತೆಗಳ ಒಡಲಲ್ಲಿ ಸದ್ಯದ ಒಂದು ಸಮಾಜದ ವಿಮರ್ಶೆಯೂ ತಣ್ಣಗೆ ನಡೆದಿದೆ. ಹೆಜ್ಜೆ ಹೆಜ್ಜೆಗೂ ಆತಂಕವನ್ನು ಬಿತ್ತುತ್ತಿರುವ ಧರ್ಮ, ದೇವರು, ಪ್ರಭುತ್ವ ಶಕ್ತಿಗಳ ಮಧ್ಯೆ ನಿಂತಿರುವ ಕವಿ ಇಲ್ಲಿ ಗೂಡು ಕಟ್ಟುವ ಧ್ಯಾನದಲ್ಲಿದ್ದಾನೆ. ದಿಕ್ಕಾಪಾಲಾಗಿರುವ ಕಡ್ಡಿಗಳನ್ನು ಒಟ್ಟು ಮಾಡಿ ಒಂದು ಗೂಡು ಕಟ್ಟಬಹುದೇ? ಎನ್ನುವ ಪ್ರಶ್ನೆ, ಕಟ್ಟಲಾದೀತೆ ಎನ್ನುವ ಆತಂಕ; ಕಟ್ಟಬಹುದು ಎನ್ನುವ ಆಸೆ ಈ ಸಂಕಲನದ ಮುಖ್ಯ ಭೂಮಿಕೆಯಾಗಿದೆ.

ನಾನು ಕವಿತೆಯಲ್ಲಿ ನಿರ್ಣಯಗಳನ್ನು
ಕೊಡಲು ಸಾವಿರಾರು ಪದಗಳು ಒತ್ತಾಯಿಸುತ್ತದೆ
ನ್ಯಾಯವನ್ನು ಒದಗಿಸಲು ಒಂದೆರಡು

ಪದಗಳು ಮಾತ್ರ ಕಣ್ಣಂಚಿನಲ್ಲಿ
ಜೇಡುತ್ತವೆ. (ಕಾವ್ಯನ್ಯಾಯ)

ನ್ಯಾಯವೆನ್ನುವುದೇ ಕಗ್ಗಂಟಾಗುತ್ತಿರುವ ದಿನಗಳಲ್ಲಿ ಕಾವ್ಯ, ಕಾವ್ಯದ ನ್ಯಾಯ ಕ್ಲೀಷೆ ಎನಿಸಬಹುದು. ಆದರೆ ಕವಿಯ ನಂಬಿಕೆ ಈ ಎರಡರ ಬಗೆಗೂ ಅಚಲವಾಗಿದೆ. ಕಾವ್ಯದ ಒಳಗಿರುವ ಸಂಕಟವನ್ನು ಅದು ಮುಟ್ಟಬೇಕಾದ ನಿಜದ ನೆಲೆಯನ್ನು ಕಂಡುಕೊಂಡಿರುವ ಕವಿ, ಈ ಮುಖೇನ ತಮ್ಮ ಕವಿತೆಗಳಿಂದ ಒದಗಿ ಬರಬಹುದಾದ ಒಂದು ಸಣ್ಣ ನೋಟವನ್ನು ತೋರುತ್ತಾರೆ.

ಎಂಥ ನೀರಿನ ಅಂಚಿನಲ್ಲು ಒಮ್ಮೊಮ್ಮೆ
ಪಾಚಿಗಟ್ಟುತ್ತದೆ– ಮಳೆಗಾಲ ಅದನ್ನು ತೊಳೆಯದೆ ಬಿಡುವುದಿಲ್ಲ
ಒಮ್ಮೊಮ್ಮೆ ನಾಲಿಗೆಗಿಂತ ಹಲ್ಲು ಬಲು ಮೃದು
ಎನಿಸುತ್ತದೆ– ಮಾತನಾಡುವ ಉತ್ಸಾಹ ಕಳೆದು ಹೋಗುವುದಿಲ್ಲ
(ಬದುಕು)

ಬದುಕಿನ ಪ್ರತಿ ಕ್ಷಣದ ಪ್ರತಿಕ್ರಿಯೆ ಮತ್ತು ಆಗುವಿಕೆಯ ನಿರಂತರತೆಯನ್ನು ಒಪ್ಪಿಕೊಳ್ಳುವ ಮನಸ್ಥಿತಿಯೇ ರೂಪಿಸಿದಂತಿದೆ– 'ಬದುಕು' ಕವಿತೆ ಮನುಷ್ಯ ತನ್ನ ಸಂಬಂಧಗಳಿಂದ, ಅವಮಾನಗಳಿಂದ, ಶೋಷಣೆಗೆ ಒಳಗಾಗಿ ಮನಸ್ಸನ್ನು ತರಚಿಸಿಕೊಳ್ಳುವುದು, ಗಾಯ ಮಾಡಿಕೊಳ್ಳುವುದು, ನಡೆಯುತ್ತಲೆ ಇದ್ದಾಗಲೂ ಈ ಬದುಕಿಗಿರುವ ತಾಳುವ ಶಕ್ತಿಯನ್ನು ಕಾಣಿಸುವ ಕಾರಣವಾಗಿ ಇಂತಹ ಕವಿತೆ ಮುಖ್ಯವಾಗುತ್ತದೆ. ಇದರ ಒಳ ಸಂಬಂಧದ ಬಗೆಗೆ ಕವಿಗೆ ಇರುವ ಬೆರಗೆಂದರೆ,

ಪ್ರತಿ ಬೆರಳಿನ ಕೊನೆಯಲ್ಲಿ ಯಾಕಿರುತ್ತದೊ
ಒಂದು ಉಗುರು
ಉಗುರಿಗೆ ನೀರುಣಿಸುವ ರಕ್ತದ ಸಹನೆ
(ನಡೆನಡೆದು)

ಆಧುನಿಕತೆ ಎಬ್ಬಿಸುತ್ತಿರುವ ಅಲೆಗಳ ಚಿತ್ರವನ್ನು ಬಿಡಿಸಿದಂತೆ ಕವಿತೆ ಬರೆಯುವ **ವಸಂತಬನ್ನಾಡಿ** ಈವರೆಗೂ 'ಕಡಲಧ್ಯಾನ', 'ನೀಲಿ ಹೂ', 'ನಿಜದನೆಲೆ', ಮೀನಿನ ಹೊಳಪನ್ನು ನೀರಿಗೆ ಬಿಟ್ಟು' ಕವನ ಸಂಕಲನಗಳನ್ನು ಪ್ರಕಟಿಸಿರುವರು.

ಸಿನಿಮಾ ನೋಡುವಾಗ
ಈಗಷ್ಟೇ ಚಲಿಸಿದ
ಚಿತ್ರಿಕೆಯ ನೆನಪೆ

ನೋಡುವವರಿಗೆ ಇರುವುದಿಲ್ಲ
ಆದುದರಿಂದ ಅವರು
ಸಿನಿಮಾ ನೋಡುತ್ತಾರೆ
(ಎಲ್ಲವೂ ಚಲಿಸುತ್ತಿದೆ)

ಹೀಗೆ ಹೇಳುತ್ತಿರುವ ಕವಿಗೆ ಕಾರಣವೇನಿರಬಹುದು ಎಂಬ ಪ್ರಶ್ನೆ ಸಹಜವಾಗಿ ಹುಟ್ಟಬಹುದು. ಸದ್ಯದ ತಲ್ಲಣಗಳ ಮಧ್ಯೆ ಕವಿ ಆಡುತ್ತಿರುವ ಈ ಮಾತುಗಳಿಗೆ ಧ್ವನಿ ಶಕ್ತಿ ಇದೆ.

ಅಂಗೈ ಅಗಲದಷ್ಟಿರುವ
ನನ್ನ ಪುಟ್ಟ ನಗರದ
ಎದೆಗೆ ನೆಟ್ಟಂತಿರುವ
ಜಾಹಿರಾತು ಹೋರ್ಡಿಂಗಿನ
ಮಾದಕ ನಗೆಯ ಹುಡುಗಿ
ತುಸುವೆ ನಕ್ಕಾಗಲೂ
ಇಡೀ ಊರೇ
ದಿಕ್ಕಾಪಾಲಾಗಿ ಡಿಕ್ಕಿ
ಉರುಳಿ ಬೀಳುತ್ತಿವೆ ದಿನಾ
ನೂರಾರು ಹೆಣ (ನಗು)

ಜಾಹಿರಾತು ಲೋಕದಲ್ಲಿ ಮುಳುಗಿರುವ ಸಮೂಹವನ್ನು ಕುರಿತು ಹೇಳುತ್ತಾ ನಮ್ಮ ಕಾಲದ ವೈರುಧ್ಯಗಳನ್ನು ದಾಖಲಿಸುತ್ತಾರೆ.

ಕ್ರಮೇಣ ಎಲ್ಲ ಅಸಹಜ ಅಮಾನುಷ ಸ್ಥಿತಿಯೂ
ಸಹಜ ಸಾಮಾನ್ಯ ಅನಿಸಿ ಬಿಡುತ್ತದೆಯೇ?
(ಸಮೂಹ ಸನ್ನಿಗೆ ಇದಿರಾಗಿ)

ಬದಲಾಗಿದೆ ಎಲ್ಲ
ನೆಲ ಹವೆ ಗಾಳಿ ಕಣ್ಣಿನ ಕಾತರ
ಇಸ್ತ್ರಿ ಮಾಡಿದಂತೆ ವಿವೇಚನೆ
(ಉರಿವ ನಾಲಗೆಯಾಗಿ ಕಾಡಿದರೂ ಸುಖ)

ಇದಕ್ಕೆ ಕಾರಣ ರೂಪಗಳನ್ನು ಕವಿತೆಯಲ್ಲಿ ಈ ಕವಿ ತರುತ್ತಾರೆ; ವಿಪರ್ಯಾಸಗಳನ್ನು ಸೂಕ್ಷ್ಮವಾಗಿ ಕಾಣಿಸುತ್ತಾರೆ. ಮೊದಲ ಸಂಕಲನದ ಅನಂತರ ವಸಂತ ಬನ್ನಾಡಿರವರ

ಕಾವ್ಯದಲ್ಲಿ ಒಂದು ಮುಖ್ಯ ಪಲ್ಲಟ ಕಾಣಿಸುತ್ತದೆ. ಈ ಪಲ್ಲಟಗಳು ಕಳೆದ ಎರಡು ದಶಕದಲ್ಲಿ ತೀವ್ರವಾಗುತ್ತಿರುವ ಹಿಂಸೆಯ ಹಲವು ರೂಪಗಳೇ ಆಗಿವೆ.

ಪತ್ರಿಕೆಗಳಲ್ಲಿ
ಕೊಲ್ಲಲು ಸಂಜ್ಞೆ ನೀಡಿ
ಸುಮ್ಮನೆ ನೋಡುತ್ತಿರುವವರ
ಪೆಪ್ಪರಮಿಂಟು ಹೇಳಿಕೆಗಳಿದ್ದವು

(ಕಡಲು ಮೊರೆಯುತ್ತಿದೆ)

ಒಣಗಿದ ಮೀನುಗಳು ಅಂಗಾತ ಬಿದ್ದು
ಆಕಾಶ ನೋಡುತ್ತವೆ
ಮುರುಟಿಹೋದ ಮನಸ್ಸುಗಳ
ಒಳಹೊಕ್ಕು ನೋಡುವ ವ್ಯವಧಾನ
ಯಾರಿಗೂ ಇರುವುದಿಲ್ಲ

(ದೋಣಿಗಳು ಚುಕ್ಕೆಗಳಾಗಿ ಹಾರಿದ್ದು)

ಸತ್ತು ಸುಡುಗಾಡು ಸೇರಿದ
ಎರಡೂ ಕಡೆಯ ಸೈನಿಕರು
ಅಣ್ಣ ತಮ್ಮಂದಿರಂತೆ ಅಕ್ಕಪಕ್ಕ ಮಲಗಿದರು

(ಅಮೆರಿಕಾ ಪಿಶಾಚಿಯ ಜೊತೆ ಕೂತು ಉಂಡದ್ದು)

ನಿಜದ ನೆಲೆಯೇ ನಿಜಕಿಲ್ಲ ಎನ್ನುವ ಹತಾಶೆಯ ಭಾವನೆ ಈ ಎಲ್ಲ ಕವಿತೆಗಳ ಹಿಂದಿದೆ.

ಅವರು
ಅವರವರ
ಮನೆಯಲ್ಲಿ
ದೇವರಂಥ ಮನುಷ್ಯರು!!!

(ದೇವರಂಥ ಮನುಷ್ಯರ ದೇವರೇ, ಎಲ್ಲಿದ್ದೀ)

ಕಳ್ಳರು, ಕೊಲೆಗಾರರು, ಮಂದಿರ ಹೊಡೆಯುವವರು, ಮಸೀದಿ ಉರುಳಿಸುವವರು, ಎಲ್ಲರೂ ತಮ್ಮ ತಮ್ಮ ಮನೆಯಲ್ಲಿ ದೇವರಂಥ ಮನುಷ್ಯರಾಗಿಬಿಡುತ್ತಾರೆ; ಆದರೆ ಹೊರಗಿನ ಪ್ರಪಂಚದಲ್ಲಿ ಅವರ ಇರುವಿಕೆ ಭಯವನ್ನೇ ಹುಟ್ಟಿಸುತ್ತಿರುತ್ತದೆ. ಇವುಗಳ ವೈರುಧ್ಯ ಈ ಕವಿತೆಯಲ್ಲಿದೆ.

ದಲಿತ ಕಾವ್ಯ ಕನ್ನಡ ಕಾವ್ಯಕ್ಕೆ ಒಂದು ಸಂಚಲನವನ್ನು ಉಂಟುಮಾಡಿರುವುದು ಈಗ ಇತಿಹಾಸ. ಮೂರನೆಯ ಅಕ್ಷರಸ್ಥ ದಲಿತ ತಲೆಮಾರು ತನ್ನ ಕಾವ್ಯದಲ್ಲಿ ಬಿನ್ನ ಸ್ತರಗಳ ಹುಡುಕಾಟದಲ್ಲಿ ಕ್ರಿಯಾಶೀಲವಾಗಿರುವ ಈ ಹೊತ್ತಿನಲ್ಲಿ ಅವರ ಕಾವ್ಯದ ಪ್ರತಿ ನಡಿಗೆಯೂ ಹೊಸ ಭರವಸೆ, ಹೊಸ ಕನಸನ್ನು ಬಿತ್ತುತ್ತಿದೆ. ಈ ಹಿನ್ನೆಲೆಯಲ್ಲಿ ಸುಬ್ಬುಹೊಲೆಯಾರ್, ಲಕ್ಕೂರು ಅನಂದ ಎನ್.ಕೆ. ಹನುಮಂತಯ್ಯ ಇವರ ಕಾವ್ಯವನ್ನು ಅವಶ್ಯ ಗಮನಿಸಬೇಕು. 'ಸೂಜಿಗಾತ್ರದ ಕೊಳವೆಯಿಂದ ಮನುಷ್ಯನೊಬ್ಬನು ಹಾಡು' ಕವನ ಸಂಕಲನ ಪ್ರಕಟಿಸಿರುವ ಕವಿ **ಸುಬ್ಬುಹೊಲೆಯಾರ್** ಕಾವ್ಯದ ಮುಖೇನ ತೆರೆದಿಡುವ ದಲಿತ ಜಗತ್ತು ಕವಿಯಾಗಿ ವ್ಯಕ್ತಪಡಿಸುವ ಕಾಳಜಿಗಳು ಚಾರಿತ್ರಿಕವಾಗಿ ಮುಖ್ಯವಾಗಿವೆ.

ನೀರೇ ನೆಲಕ್ಕೆ ಮೈಲಿಗೆಯಾಗಿರಲು
ಪಾಮರ ನಾನು ಪಾದ ಎಲ್ಲಿಡಲಿ ಮೇಲಿನವರೆ?
(ಸೂಜಿಗಾತ್ರದ ಕೊಳವೆಯಿಂದ ಮನುಷ್ಯನೊಬ್ಬನ ಹಾಡು)

ಬಚ್ಚಿಟ್ಟುಕೊಳ್ಳಲಿ ಎಲ್ಲಿ
ಅವಮಾನದ ಕಲ್ಲು ಸಕ್ಕರೆಯನ್ನ?
(ಮೌನ ಬಿಟ್ಟು ಹೋಗುವುದೆಲ್ಲಿಗೆ?)

ಕವಿ ಎತ್ತುವ ಇಂತಹ ಪ್ರಶ್ನೆಯ ಹಿಂದೆ ಶತಮಾನದ ನೋವಿದೆ. ತುಳಿತಕ್ಕೊಳಗಾದವರು ಮಾತನಾಡಲು ಆರಂಭಿಸಿದಾಗ ಅಸ್ಪೃಶ್ಯತೆ ಎನ್ನುವ ವೈರಸ್ ಅವರನ್ನು ಕಾಡುತ್ತದೆ. ಹಿಂದೂ ಧರ್ಮದ ಮಡಿವಂತಿಕೆಯ ಬಗೆಗೆ ಆಕ್ರೋಶವು ಸಜಹವಾಗಿಯೇ ವ್ಯಕ್ತವಾಗುತ್ತದೆ. ಹಾಗಾಗಿಯೇ ಕವಿ ರೊಚ್ಚಿನಲ್ಲಿ ಹೇಳುವುದು ಮಾರ್ಮಿಕವಾಗಿದೆ.

ಊರಿಗೊಂದು ಹೊಲಗೇರಿ
ಎಲ್ಲರೆದೆಯಲ್ಲಿ ನೂರೆಂಟು ಹೊಲಗೇರಿ
(ಉಸಿರುಸುಟ್ಟ ಇತಿಹಾಸ ಹೆಗಲ ಮೇಲೆ)

ನಿಷೇದ ಮಾಡಬೇಡಿ ಕೊಲ್ಲುವವರನ್ನು
ಇನ್ನಷ್ಟು ಕೊಲ್ಲಬೇಕು ನನ್ನಂತಹವರನ್ನು
ಕೊಲ್ಲುವವರು ಹಸುವಿನ ಹಾಲು ಕುಡಿಯುತ್ತಾರೆ
ಕೊಲ್ಲಲ್ಪಡುವವರು ತಾಯಿ ಹಾಲು ಕುಡಿಯುತ್ತಾರೆ
(ಕೊಲ್ಲುವವರು ಹಸುವಿನ ಹಾಲು ಕುಡಿಯುತ್ತಾರೆ)

ನಾನೆಷ್ಟು ವಿನಯವಂತ ಮತ್ತು ಕರುಣಾಳು ಎಂದರೆ,
ನನಗಾದ ದುಃಖವನ್ನು ಹಸಿದ ಹೊಟ್ಟೆ
ಅನ್ನ ಮುಕ್ಕುವಂತೆ ಮುಕ್ಕುತ್ತೇನೆ
ಎಂಜಲಾಗದ ಕೈ ಬಾಯಿಗಳಿಗೆ
ನಿರಾಶೆಯಾಗದಿರಲೆಂದು ತೇಗೆ ಸುಧಾರಿಸಿಕೊಳ್ಳುತ್ತೇನೆ
ಎಲ್ಲವನ್ನೂ
ಹೊತ್ತು ನಿಂತಿವೆ ಕಾಲುಗಳು ಇಷ್ಟು ಗಾತ್ರದ ದೇಹವನ್ನು
ಗಾಳಿಯಷ್ಟು ಆಲೋಚನೆಯನ್ನ
ಗೋಡೆಯಂತೆ ಕುಸಿಯುವ ಕನಸುಗಳನ್ನ
(ಅಳಿಸಲಾಗದ ಅಳುವಿನಂತೆ)

ಬೆಳಕೆನ್ನುವುದು
ಬಳಪದಷ್ಟು ಸಣ್ಣ ಬೆಳಕಾಗಿದ್ದರೂ
ನಿಷ್ಕಳಂಕವಾಗಿ ಮಗುವಿನಂತೆ
ನಕ್ಕವರೊಟ್ಟಿಗೆ ನಗಬಹುದಿತ್ತು
ನಲ್ಮೆಯ ಹೊಲಗೇರಿ
ಕಪ್ಪಗಿನ ಸ್ಲೇಟಾಗಿದ್ದರೆ
ಬಿಳಿಯ ಪದ್ಯ ಬರೆಯಬಹುದಿತ್ತು
ಆತ್ಮ ಹಾಲಿನ ನೊರೆಯಂತಿದ್ದರೆ
ಅವರ ಕಣ್ಣುಗಳಲ್ಲಿ
ಸುರಿಯುವ ಕಣ್ಣೀರಿಗೆ ಪಾಪ ಅನ್ನಬಹುದಿತ್ತು.
(ಒಂದು ಹೊರೆ ಸೌದೆಯಷ್ಟು)

ಪುರೋಹಿತಶಾಹಿ ಮನಸ್ಸುಗಳನ್ನು ಹೀಗೆ ವ್ಯಂಗ್ಯದ ಮೂಲಕ ಎದುರು–ಗೊಳ್ಳುತ್ತಿರುವುದು, 'ಇವ ನಮ್ಮವ' ಎಂದುಕೊಳ್ಳಲಿ ಎನ್ನುವ ಮನುಷ್ಯ ಸಹಜ ಹಂಬಲವೇ ಕಾರಣವಾಗಿದೆ.

ಸುಬ್ಬು ಹೊಲೆಯರ ಕಾವ್ಯ ಮಾರ್ಗದಂತೆಯೇ **ಲಕ್ಕೂರು ಆನಂದರ** ಕಾವ್ಯ ದಮನಿತರ ಪರವಾದ ಅಭಿವ್ಯಕ್ತಿಯಾಗಿದೆ. ಊರಿಂದ ಊರಿಗೆ, ಇಪ್ಪತ್ತರ ಕಲ್ಲಿನ ಮೇಲೆ, ಬಡವಾಡೆಯಾಗದ ರಸೀದಿ ಕವನ ಸಂಕಲನಗಳನ್ನು ಪ್ರಕಟಿಸಿರುವ ಈ ಕವಿ ಪ್ರತಿಮಾಲೋಕದ ಮೂಲಕ ತೋರುವ ನೋಟ ಮುಖ್ಯ.

ಸುಮ್ಮನಿರಲಾರದೆ ಗುಲಾಬಿಗೆ ಮುತ್ತಿಡೋಣವೆಂದರೆ
ಎಚ್ಚೆತ್ತ ಗುಲಾಬಿ ಯಾವ ಕುಲ?
ಯಾವ ಮತ? ಎಂಬ ಪ್ರಶ್ನೆ ಕೇಳುತ್ತ ದಿಟ್ಟಿಸಿ ನೊಡುತ್ತಿದೆ
(ದೇವರಿಗೊಂದು ಬೇವರ್ಸಿಯೊಬ್ಬನ ಅರ್ಜಿ)

ಕಾಗೆ, ಗೂಗೆಗಳ ಜೋಗುಳದ ಹಾಡು
ಜಾಜಿ, ಮಲ್ಲಿಗೆಯೊಳಗೆ ಜೊಡಿಯಾಗದ ಜಲುಮ
ಪ್ರೀತಿ ಸೀಮೆಯ ತುಂಬ
ದಾಖಲಾಗಿದೆ ಸಂತೆ
ಅ ಸಂತೆ ಮಾಳದ ತುಂಬ ಕರಿನೆತ್ತರ ಕಲೆಗಳು
(ನೀಲಿಕಣ್ಣು)

ನಿನ್ನ ಹೆಬ್ಬೆರಳು ಪಡೆದಾಗಿನಿಂದ
ಆರ್ಥಕ್ಕುಳಿದು ಹೋಗಿದೆ ಹಗಲು
ಬೇಡದ ಬದುಕಿನ ತುಂಬ
ಸಾವು ಸಾಲಾಗಿ ಬರುತ್ತಲೆ ಇದೆ
(ಬಟವಾಡೆಯಾಗದ ರಸೀದಿ)

ಚಾರಿತ್ರಿಕವಾದ ಲೋಕ ಸ್ಮೃತಿಯ ಅರಿವಿರುವ ಕವಿ ಏಕಲವ್ಯನನ್ನು ಮರೆಯಲಾರ. ಅವನಿಗಾದ ಅನ್ಯಾಯವನ್ನು ಕವಿತೆಯಲ್ಲಿ ತರದೆ ಇರಲಾರ. ಏಕೆಂದರೆ ಅವನ ಸುತ್ತಮುತ್ತಲು ಈಗಲೂ ಕರಿ ನೆತ್ತರ ಕಲೆಗಳು ಉಳಿದು ಹೋಗಿದೆ. ಅದು ದಮನಿತರ ರಕ್ತವೆಂಬ ಸತ್ಯವೂ ಕೂಡ ಕವಿಗೆ ತಿಳಿದಿರುವಂತದ್ದೆ. ಹಾಗಾಗಿ ಭಿನ್ನ ಭೇದವೆಣಿಸುವ ಮನುಷ್ಯನಿಗಿಂತ ಗುಲಾಬಿ ಲೇಸು ಎಂದು ಕವಿ ಭಾವಿಸುತ್ತಾನೆ. ಆದರೆ ಆ ಗುಲಾಬಿಯೋ ರಾಜಕೀಯ ಪಕ್ಷದಂತೆ ಜಾತಿ, ಧರ್ಮದ ಹಿನ್ನೆಲೆ ನೋಡುತ್ತಿದೆ. ಜಾತಿಯ ಸುತ್ತ ನೇಯ್ದ ಬಲೆಗೆ ಕವಿ ಇಲ್ಲಿ ಸಾಕ್ಷಿಯಾಗಿದ್ದಾನೆ. ಜಾತಿಯ ಪರಿಧಿಯ ಆಚೆಗೆ ನಿಂತು ನೋಡಬಯಸಿದಾಗಲೂ ಈ ಜಗತ್ತು ಕವಿಗೆ ನಿರಾಶೆಯನ್ನೇ ಉಂಟುಮಾಡುತ್ತಿದೆ. ಏಕೆಂದರೆ,

ತಿರುಗಾಡುವ ಯಾರನ್ನಾದರೂ ನೋಡಲಿ
ತಲೆಯ ಮೇಲೊಂದು ಭಾರವನ್ನು ಹೊತ್ತು
ನಿಂತಿರುವಂತೆ ಕಾಣುತ್ತಾರೆ
ಬರಿದು ಮಾಡಿಕೊಳ್ಳುವ ಯತ್ನದಲ್ಲಿ
ಮತ್ತೆ –ಮತ್ತೆ ಭಾರವನ್ನು ತುಂಬಿಕೊಳ್ಳುತ್ತಾರೆ. (ಹಾಲಿಲ್ಲ ಬಟ್ಟಲಲ್ಲಿ)

ಭಾರವಾದ ವ್ಯಕ್ತಿಗಳ ನಡುವೆ ಕವಿ ಈ ಬದುಕನ್ನು ಕಂಡುಕೊಂಡಿರುವ ರೀತಿ ಮನೋಜ್ಞವಾಗಿದೆ.

ಚಣದ ಆಟಕ್ಕೆ ಋಣದ ಲೆಕ್ಕದ ಮುಕ್ತಾಯ
ತುದಿಗಳಿಲ್ಲದ ಗೆರೆ ಕೊನೆಗೆ ಸಂಕಟದ ಕಣ್ಣು ನಗಲು
ಜೀವ ಲೋಲಾಕದ ವ್ಯಕ್ತ ಮಧ್ಯದಲ್ಲಿ ಜೀವದುಸಿರು

(ಪಾಡಿ)

ದಲಿತ ಕಾವ್ಯವೆಂದರೆ ಅದು ನೋವಿನ ಹಾಡು ಮಾತ್ರವಲ್ಲ ಅದು ಜೀವನ ದರ್ಶನವನ್ನು ಕಾಣಬಲ್ಲುದು ಎನ್ನುವುದಕ್ಕೆ ಈ ಮೇಲಿನ ಕವಿತೆ ಉದಾಹರಣೆ ಆಗಬಲ್ಲದು.



ದಲಿತ ಪ್ರಜ್ಞೆಯನ್ನು ಮೀರುವ ತವಕ, ಅದರಾಚೆಗೆ ಲೋಕದ ವಾಸನೆಗೆ ಮುಖಾಮುಖಿಯಾಗುವ ಆಶಯವನ್ನು ಲಕ್ಕೂರು ಆನಂದರ ಕಾವ್ಯದಲ್ಲಿ ಢಾಳಾಗಿ ಕಾಣಿಸುತ್ತದೆ. ಈ ಪ್ರಜ್ಞೆ ಎನ್.ಕೆ. ಹನುಮಂತ್ಯಯ್ಯನವರಲ್ಲಿ ದಟ್ಟವಾಗಿದೆ. **ಎನ್.ಕೆ. ಹನುಮಂತಯ್ಯ**ನವರ ಕಾವ್ಯ ಸದ್ಯದ ಕನ್ನಡ ಕಾವ್ಯಕ್ಕೆ ಶಕ್ತಿಯನ್ನು ಹೆಚ್ಚಿಸುತ್ತಿದೆ. 'ಹಿಮದಹೆಜ್ಜೆ', 'ಚಿತ್ರದ ಬೆನ್ನು', ಕವನ ಸಂಕಲನಗಳನ್ನು ಪ್ರಕಟಿಸಿರುವ ಹನುಮಂತಯ್ಯರವರ ಕವಿತೆಗಳು ವಿಶಿಷ್ಟವೆನಿಸುತ್ತದೆ. ನಾನು ಅಕ್ಷರದ ಹಾದಿಯಲ್ಲಿ ನಡೆದಂತೆಲ್ಲಾ 'ಸ್ವಾಂತಂತ್ರ್ಯ'ವೆನ್ನುವುದನ್ನು ಕಳೆದುಕೊಂಡಿರುವ ಅರಿವಾಯಿತು. ಅಂತಹ ಸ್ವಾತಂತ್ರ್ಯವನ್ನು ಬರಹದ ಮೂಲಕ ಹುಡುಕಬೇಕೆಂದು ಹೊರಟಾಗ ಹುಟ್ಟಿದ ಕವಿತೆಗಳು..... ಎಂದು ತನ್ನ ಮೊದಲ ಸಂಕಲನ ಹಿಮದ ಹೆಜ್ಜೆಯಲ್ಲಿ ಹನುಮಂತಯ್ಯ ಬರೆದುಕೊಂಡಿರುವುದನ್ನು ಇಲ್ಲಿ ಗಮನಿಸಬೇಕು.

ದಲಿತತ್ವದ ಬೇರುಳ್ಳ ಈ ಕವಿ ದಲಿತರಾಚೆಗಿನ ಲೋಕವನ್ನು ವೀಕ್ಷಿಸಲು ಸಮರ್ಥನಾಗಿರುವುದರಿಂದ ಬಹುರೂಪತೆ ಇವರ ಕಾವ್ಯಕ್ಕೆ ದಕ್ಕಿದೆ. ಇದು ದಲಿತ ಸಾಹಿತ್ಯದ ವಿಸ್ತೃತ ರೂಪವೇ ಆಗಿದ್ದು ಕನ್ನಡ ಕಾವ್ಯ ಸಂದರ್ಭದೊಳಗೆ ಇದೊಂದು ಮುಖ್ಯ ತಿರುವು ಕೂಡ ಆಗಿದೆ. ಕನ್ನಡ ಕಾವ್ಯ ಸಂದರ್ಭದೊಳಗೆ ಇದೊಂದು ಮುಖ್ಯ ತಿರುವು ಕೂಡ ಆಗಿದೆ. ಇದಕ್ಕೆ ಉತ್ತಮ ಉದಾಹರಣೆಯಾಗಿ ಈ ಕವಿತೆ ಕಾಣಿಸುತ್ತದೆ.

ಬಾ ಗೆಳತಿ
ಚೂರಾದ ಮುಖಗಳನು ಆಯೋಣ
ಎಲ್ಲಾದರೂ
ನಗು ಮೆತ್ತಿಕೊಂಡಿದ್ದರೆ
ನಮ್ಮ ತುಟಿಗಳಿಗೆ ತುಂಬಿಕೊಳ್ಳೋಣ...

ಎಲ್ಲಾದರೂ
ಅಳು ಅಂಟಿಕೊಂಡಿದ್ದರೆ,
ನಮ್ಮ ಕಣ್ಣುಗಳಿಗೆ ಬಸಿದುಕೊಳ್ಳೋಣ
ಬಾ ಗೆಳತಿ
ಚೂರಾದ ಎದೆಗಳನು ಆಯೋಣ
ಎಲ್ಲಾದರೂ ಹದವಿದ್ದರೆ,
ಅಲ್ಲಿ ಬೀಜಗಳಾಗಿ ಮೊಳೆಯೋಣ. . . . .

(ಹೆಜ್ಜೆಯ ಹಿಂದೆ)

ಕಂಡ ಮನೆ ಮನೆಯಲ್ಲ
ಕಾದಂಬರಿಗಳಾಗಿರಲು
ಕಾರಂತ ಭೈರಪ್ಪರೆಂದು
ನಾನೇಕೆ ಕೊರಗಲಿ?

(ನನ್ನ ಗೂಡಲಿ)

ದಲಿತ ಕಾವ್ಯ ಅದು ಮಂಡನೆಯಷ್ಟೇ ಅಲ್ಲ ಅದು ಪರೀಕ್ಷೆ ಮತ್ತು ಸ್ವಪರೀಕ್ಷೆ ಕೂಡ ಎನ್ನುವುದನ್ನು ಈ ಕವಿ ಸೂಚಿಸುತ್ತಾರೆ.

ದಿಕ್ಕಿರದ ತೊಡೆ ಕಕ್ಕಿದ ಕೂಸು
ಕಂಗೆಟ್ಟು ಕೂಗುತ್ತಿವೆ;
ದೇವರೇ ನಮಗೆ
ತೂತು ಕಾಸಿದ್ದರೆ ತೇದು ಕುಡಿಸು

(ಹಿಮದ ಹೆಜ್ಜೆ)

ಸಮುದಾಯದ ನೋವಿನ ಭಾಗವನ್ನೇ ಕಿತ್ತಿ ಇಟ್ಟಂತೆ ಬರೆಯುವ, ಕವಿ ಕೊಡುವ ಇಂತ ಚಿತ್ರ ಸಮುದಾಯದೊಳಗೆ ಬೆರೆತುಹೋಗಿದೆ.

ಅಗ್ನಿ ಮಾಂಸದ ಕುಲುಮೆಯಲಿ
ನನ್ನ ಕಾಯಿಸಿ ಬಣ್ಣವ ಮಾಡಿ
ಮರಳಿ ನನ್ನ ರೂಪನೇ ಕಡೆವ
ಏ ನನ್ನಾಳದ ಅಳುವೇ
ನನ್ನ ಚಿತ್ರಕ್ಕೇಕೆ ಬೆನ್ನ ಬರೆವೆ

(ಚಿತ್ರದ ಬೆನ್ನು)

ದಲಿತರಿಗೆ ಮಲ ಹೊರಲು, ಬಾರ ಹೊರಲು ಬೆನ್ನನ್ನು ಮಾತ್ರ ಬರೆದಿರುವ ಲೋಕದ ಎದುರು ನಿಂತು ಕವಿ ತನಗೂ ಒಂದು ಮುಖ, ರೂಪವಿದೆ ಎನ್ನುವುದನ್ನು ಸ್ಪಷ್ಟಪಡಿಸುತ್ತಿದ್ದಾನೆ. ದಲಿತರ ಅಸ್ತಿತ್ವವನ್ನು ಈ ಕವಿತೆ ಕಟ್ಟಿಕೊಡುತ್ತದೆ. ಇದೇ ಭಾವವನ್ನು ಇನ್ನೊಂದು ಕೋನದಲ್ಲಿ ಪ್ರತಿಮೆಯ ಮೂಲಕ ಈ ಕವಿ ಹೇಳುವುದೇನೆಂದರೆ,

ಅಸ್ಪೃಶ್ಯ!
ಹೌದು; ನಾನು ವಿದ್ಯುತ್ತಿನ ಹಾಗೆ
ನಿಮ್ಮ ತಣ್ಣನೆಯ ಸ್ಪರ್ಶಕ್ಕೆ
ಸಿಕ್ಕಲಾರೆ
. . . . . . . .
ಅಸ್ಪೃಶ್ಯ
ಹೌದು; ನಾನು ಗೋವು ತಿಂದು
ಗೋವಿನಂತಾದವನು
ನೀವು ನೀಡುವ ಮೇವು ತಿಂದು
ನಿಮ್ಮಂಥ ಮನುಷ್ಯನಾಗಲಾರೆ
ಮನುಷ್ಯರನ್ನು ತಿನ್ನಲಾರೆ

(ಗೋವು ತಿಂದು ಗೋವಿನಂತಾದವನು)

ಸಮುದಾಯದ ನೆನಪುಗಳನ್ನು ಜಾಗತೀಕರಣ ಅಳಿಸಿ ಹಾಕುತ್ತಿರುವ ಈ ಹೊತ್ತಿನಲ್ಲಿ ಒಂದು ಸಮುದಾಯದ ಸಂಸ್ಕೃತಿಯನ್ನು ಕೀಳು ಎಂದು ಬಿಂಬಿಸಿ ಮತ್ತೊಂದು ಸಂಸ್ಕೃತಿಯನ್ನು ಹೇರುತ್ತಿರುವ ಸಂಗತಿಗಳು–ಸಂಘರ್ಷಗಳು ನಡೆಯುತ್ತಲಿದ್ದು; ಈ ಕವಿತೆಯಲ್ಲಿ ಕವಿ ಗೋವು ಸೇವನೆಯನ್ನು ಆಹಾರಕ್ರಮ ಎಂದು ಝುಂಕಿಸಿ ಹೇಳುವುದರ ಜೊತೆಗೆ ಅದಕ್ಕೊಂದು ತಾತ್ವಿಕತೆಯ ರೂಪ ನೀಡಿದ್ದಾನೆ. ನಾನು ವಿದ್ಯುತ್ತಿನ ಹಾಗೆ ಎನ್ನುವುದು ಆತ್ಮವಿಶ್ವಾಸದ ಪ್ರತೀಕವಾಗಿ ನಮ್ಮ ಕಾಲದ ಶಕ್ತ ಪ್ರತಿಮೆಯೇ ಆಗಿಬಿಡುತ್ತದೆ.

ಸಾವಧಾನದ ಹಾದಿಯಲ್ಲಿ ನಿಂತು ಕವಿತೆಯನ್ನು ಬರೆಯುತ್ತಾ ಬಂದಿರುವ ಕವಿ **ಡಿ.ಎಸ್.ರಾಮಸ್ವಾಮಿ.** ಬದುಕಿನ ಶೋಧ ಮತ್ತು ಪರಂಪರೆಯೊಂದಿಗೆ ಮುಖಾಮುಖಿ ಇವೆರಡೂ ಇವರ ಕಾವ್ಯದಲ್ಲಿ ಪ್ರಧಾನವಾಗಿ ಕಾಣಿಸುತ್ತದೆ. 'ಮರೆತ ಮಾತು', 'ಉಳಿದ ಪತ್ರಿಮೆಗಳು' ಇವರ ಎರಡು ಕವನ ಸಂಕಲನಗಳು.

ಮೃಷ್ಟಾನ್ನ ಚಿತ್ರದೆದುರು ನಿತ್ಯ ಉಪವಾಸ
ಖಾಲಿ ಹೊಟ್ಟೆಗೆ ನಿಲುಕುವುದು ಬರಿಯ ಪ್ರಶ್ನೆ

ಕನಸೆಲ್ಲ ಕಳೆವ ಗಾಳಿ ವೇಗವೇ ಹೆಚ್ಚು, ನಿಜ
ಒಳ ಸುಳಿಗೆ ಸಿಲುಕದೇ ನಿಲುವುದು ಹೇಗೆ?
(ಜಾಗತೀಕರಣ)

ಜಾಗತೀಕರಣ ತಂದೊಡ್ಡಿರುವ ಸವಾಲುಗಳನ್ನು ಕವಿ ನೆನಪಿಗೆ ತರುತ್ತಾರೆ. ಮೃಷ್ಟಾನ್ನದ ಚಿತ್ರ ಮಾತ್ರವಿದೆ. ಆದರೆ ಮೃಷ್ಟಾನವಿಲ್ಲ; ಹಸಿವು ಇಂಗುತ್ತಿಲ್ಲ. ಕನಸುಗಳ ನೆಪದಲ್ಲಿ ಮನುಷ್ಯನ ಬೇಕುಗಳನ್ನು ಉದ್ದೀಪಿಸುತ್ತಿರುವ ಪ್ರಕ್ರಿಯೆ ಕವಿಯನ್ನು ಹೆಚ್ಚು ಕಾಡಿದೆ.

ಊರೊಳಗೇ ಹರಿದು ಹೋಗುವ ಹೆದ್ದಾರಿಗೆ
ಅಂಟಿ ನಿಂತಂತಿವೆ ಎಷ್ಟೊಂದು ರಸ್ತೆಗಳು
ಉಬ್ಬು,ತಗ್ಗು, ಇಳಿಜಾರು, ತಿರುವು
ಬೆಟ್ಟವನ್ನೂ ಕಡಿದು ತೆರೆದಿಟ್ಟ ಬಯಲು
. . . . . . . . . . . . . . . .
ದಿನದಿಂದ ದಿನಕ್ಕೆ ಕೆಡುತ್ತಲೇ ಇವೆ ನಮ್ಮೊಳಗಿನ ರಸ್ತೆಗಳು
(ರಸ್ತೆಗಳು)

ಹೆದ್ದಾರಿಯ ಮುಂದೆ ನಿಂತಿರುವ ಕವಿಗೆ ರಸ್ತೆ ಅಗಲವಾಗಿ ಶೃಂಗಾರಗೊಂಡಿರುವುದು ಯಾವ ರೀತಿಯ ಲಘುಬಗೆಯನ್ನು ನೀಡುತ್ತಿಲ್ಲ. ಬದಲಿಗೆ ಆತಂಕವನ್ನು ಹೆಚ್ಚು ಮಾಡಿದೆ. ಬೆಟ್ಟವನ್ನೂ ತರಿದು ಹಾಕಲು ನಿಂತ ಬುಲ್ಡೋಜರ್‌ಗಳು, ಆಧುನಿಕ ನವ ಸಾಧನಗಳು ವರ್ತಮಾನದ ಒಂದು ಕೇಡು ಎಂದೇ ಭಾಸವಾಗುತ್ತದೆ. ಹೀಗಿದ್ದರೂ ಕವಿ ಕಟ್ಟೆಚ್ಚರದಿಂದಿದ್ದಾನೆ. ಅವನಿಗೆ ನಮ್ಮೊಳಗಿನ ಅಂತರಂಗದ ರಸ್ತೆಗಳ ಬಗೆಗೆ ಕಾಳಜಿ. ಹೊರಗಿನ ಪಲ್ಲಟಗಳನ್ನು, ಆಧುನಿಕತೆಯ ಆವರ್ತನವನ್ನು ಕವಿತೆಗಳಲ್ಲಿ ತರುವ ಕವಿ, ಬದುಕಿನ ಪಡಸಾಲೆಯಲ್ಲಿ ಕುಳಿತು ಕಂಡುಕೊಳ್ಳುವ ಅನುಭಾವ ವಿಶಿಷ್ಟವಾಗಿದೆ.

ಇದ್ದ ಹಾಗೆ ಇದ್ದಕ್ಕಿದ್ದಂತೆ
ಮನೆ, ಮಡದಿ, ಮಕ್ಕಳನ್ನೆಲ್ಲ ತೊರೆದು
ರಾತ್ರೋ ರಾತ್ರಿ ಎದ್ದು ಹೋಗಿ ಬಿಡೋಣವೆಂದರೆ
ನರೆತ ಕೂದಲಿಗೆ ಹಚ್ಚುತ್ತಿರುವ ಬಣ್ಣ
ನಿತ್ರಾಣದಲ್ಲೂ ರೋಮಾಂಚನವೆಬ್ಬಿಸುವ ಮಾತ್ರೆ
ಇನ್ನೇನು ಮುಗಿದೇ ಹೋಯಿತೆನ್ನುವಾಗಲೂ ಕರೆವ
ಖಾಸಗಿ ನರ್ಸಿಂಗ್ ಹೋಮಿನ ದುಬಾರಿ ಕೊಠಡಿ
ಎದ್ದ ಕಾಲುಗಳನ್ನಿಲ್ಲಿಗೇ ಅಂಟಿಸಿಬಿಡುತ್ತವೆ.
(ಅವಸ್ಥೆ)

ಇನ್ನೇನು ಈ ಬದುಕನ್ನು ಮುಗಿಸಿಬಿಡಬೇಕು ಅವಸ್ಥೆಯೊಳಗೆ ಎಂದು ಕವಿ ಅಂದುಕೊಂಡಾಗಲೂ, ಈ ಬದುಕಿನ ಆಕರ್ಷಣೆ, ಸೆಳೆತ, ಬದುಕುವಂತೆ ಮಾಡುವ ನಿಜವನ್ನೇ ಕವಿ ಇಲ್ಲಿ ಕಾಣಿಸುತ್ತಾರೆ.

ವರ್ಷ ವರ್ಷವೂ ಸಿಗುವ ಇಂಕ್ರಿಮೆಂಟುಗಳಲ್ಲೇ
ಆಶೆ, ಕನಸುಗಳ ರಂಗು ಆಯಸ್ಕಾಂತದ ಸೆಳೆತ
ವಧು ಪರೀಕ್ಷೆಗೆ ಬಂದವರೊಬ್ಬರೂ ಮನಕೆ ಸಲ್ಲದೇ
ಮತ್ತೆ ಮತ್ತೆ ಮುಂದೂಡುತ್ತಲೇ ಬಂದ ಅಜೆಂಡಾ
ಅಪ್ಪನ ಮರೆವಿಗೆ ಮಗಳ ಮದುವೆಯೂ ಹೊರತಲ್ಲವಲ್ಲ
(ದುಡಿವ ಹುಡುಗಿಯ ದಿನಚರಿಯಿಂದ)

ಆಧುನಿಕ ಜೀವನದ ಮಗ್ಗಲಿನ ನಿಟ್ಟುಸಿರ ಚಿತ್ರವನ್ನು ಕವಿ ತೋರುತ್ತಾರೆ. ಹುಡುಗಿಯರು, ಸ್ತ್ರೀಯರು ದುಡಿಯುತ್ತಿರುವುದು ಮಹತ್ತರ ಬೆಳವಣಿಗೆಯಾಗಿರು-ವಾಗಲೂ ಅವರ ಬದುಕಿನ ದುಗುಡ ಕಣ್ಣ ಮುಂದೆ ಬರುತ್ತದೆ. ಗಂಡು-ಹೆಣ್ಣುಗಳ ಹುಡುಗಾಟಕ್ಕೆ ಆಧುನಿಕ ಸಾಧನಗಳು, ಅನುಕೂಲಗಳು ದಂಡಿಯಾಗಿ ತೆರೆದು-ಕೊಳ್ಳುತ್ತಿರುವ ಸಂದರ್ಭದ ನಡುವೆಯೂ ಬಣ್ಣಕ್ಕಾಗಿ ಹಂಬಲಿಸುವ ಇಂಥ ಬದುಕಿನ ಕಡೆಗೆ ಕವಿ ಮನಸ್ಸು ತುಡಿಯುತ್ತದೆ.

ಚುಕ್ಕಿಗಳ ನೆರವಲ್ಲಿ ಗೆರೆ ಎಳೆಯುವುದು ಸುಲಭ
ಬೇಕಿದ್ದರೆ ವಿನ್ಯಾಸಕ್ಕೆರಡು ಶಂಖು, ಚಕ್ರ
ಮೊತ್ತ ಮೊದಲನೆಯದಕ್ಕೂ, ಕಟ್ಟಕಡೆಯದಕ್ಕು
ಇದ್ದೂ ಇಲ್ಲದಂತಿದ್ದ ಸಂಬಂಧ
ರಂಗವಲ್ಲಿಯ ಎಳೆಯಲ್ಲಿ ಹೇಗೆ ಬೆಳೆಯಿತು ಬಂಧ?
. . . . . .  . . . . . . . . . . . . .
ಚುಕ್ಕೆ ಮೂಡುವ ಸಂಜೆ ಎಳೆ ಬಿಸಿಲ ಮಾಟ
ತುಳಿದ ಚಿತ್ರದ ಮುರುಕು ಅವಶೇಷ

ಬೆಳಕಷ್ಟೂ ಕರಗಿ ಮಬ್ಬು ಕವಿಯುವ ಮೊದಲು
ತುಳಸಿಯ ಬಳಿ ತಂದಿತ್ತ ಮಿಣುಕು ದೀಪ
ರಂಗವಲ್ಲಿಯ ಗುರುತೂ ಅಳಿಸಿ, ಛೇ, ಯಾರದಿದು ಶಾಪ?
(ಚುಕ್ಕೆ ಮತ್ತು ರಂಗವಲ್ಲಿ)

ಕನ್ನಡ ಕಾವ್ಯದೊಳಗೆ ರಂಗೋಲಿಯ ಪರಂಪರೆಯೂ ಒಂದಿದೆ. ಕೆ.ಎಸ್.ನಿಸಾರ್ ಅಹಮದ್, ಪುತಿನ, ರೂಪ ಹಾಸನ ಮೊದಲಾದವರು ರಂಗವಲ್ಲಿಗೆ ಸಂಪ್ರದಾಯ, ಧಾರ್ಮಿಕ ಬದುಕಿನ ತಾತ್ವಿಕ ರೇಕುಗಳನ್ನು ನೀಡಿದ್ದಾರೆ. ಈ ಹಾದಿಯಲ್ಲಿ ಈ ಕವಿತೆಯೂ ಕೂಡ ಗಮನಿಸಬೇಕಾದದ್ದು. ಬದುಕಿನ ನಾಲ್ಕು ದಿನ ಆಟವನ್ನು, ಅದರ ಅವಸ್ಥಾಂತರಗಳನ್ನು ಈ ಕವಿ ಮನಸ್ಸಿಗೆ ತರುತ್ತಿದ್ದಾರೆ. ಸಾವು ಎಂಬ ಶಾಪವನ್ನು ಮನುಷ್ಯರಿಗೆ ಯಾರು ಕೊಟ್ಟರೋ ಗೊತ್ತಿಲ್ಲ. ಆದರೆ ತನ್ನ ಎಲ್ಲಾ ವೇಷ ಕಳಚಿ ಮನುಷ್ಯ ಸಾಯಲೇಬೇಕಾಗುತ್ತಲ್ಲ; ಅದರಂತೆಯೇ ಬೆಳಿಗ್ಗೆ ಬಿಡಿಸಿದ ರಂಗವಲ್ಲಿಯ ಚಿತ್ರ ಮಧ್ಯಾಹ್ನ ಮಸುಕಾಗಿ ಸಂಜೆ ಅಷ್ಟೊತ್ತಿಗೆ ಇಲ್ಲದಂತಾಗುವ ನಿಜವು ಈ ಕವಿತೆಯೊಳಗಡೆ ಕಂಡು ಬರುತ್ತದೆ. ಹಾಗಾಗಿಯೇ ಕವಿಗೆ ಕವಿತೆ ಆಗಿಸುವುದಕ್ಕಿಂತ ಈ ಬದುಕಿನ ಬಗೆಗೆ ವಿನಯವಿದೆ. ಏನು ಮಾಡಿ ಸಾರ್ಥಕವಾದೀತು ಎನ್ನುವ ಪ್ರಶ್ನೆಯ ಮುಂದೆ ಕವಿಯ ವಿನಯ ಹೀಗಿದೆ;

ಪ್ರಪಂಚದಲ್ಲಿ ನಿಂತು ಕ್ಷಣ ಗಮನಿಸಿದರೆ ಸಾಕು
ಬರವಣಿಗೆ ಸಿಗದನುಭವದ ಸಂತೆ ಅಕ್ಷಯದ ಸರಕು
ನಮ್ಮೊಳ ಕೊಳಗಗಳಿಗೆ ನಮ್ಮದೇ ಕಿರು ಬೊಗಸೆಯಲ್ಲಿ
ಹನಿಸಿಕೊಂಡರೆ ಸಾಕು, ಜೀವ ಸಾರ್ಥಕ (ಉತ್ತರ)

ಬದುಕಿನೊಟ್ಟಿಗೆ ನಿಜದ ನೆಲೆಗೆ ತೆತ್ತುಕೊಳ್ಳುವ ಜೀವಗಳು ಇದ್ದಾರೆಯೇ? ಎಂಬ ಪ್ರಶ್ನೆ ಕವಿಯನ್ನು ಕಾಡುತ್ತದೆ. ತನ್ನ ಸುತ್ತಲಿನ ಜೀವ ಪರಿಸರದಲ್ಲಿ ಅಂತಹ ಕುರುಹುಗಳು ಕಾಣಿಸುತ್ತಿಲ್ಲ. ಆದ್ದರಿಂದಲೇ ಕವಿ ಕೇಳುವ ಪ್ರಶ್ನೆ ಹೀಗಿದೆ,

ಮಿಂದು, ಮಡಿಯುಟ್ಟು ಮಾದರಿಯಾಗುವುದುಂಟಲ್ಲ
ಅದೆಂದರೆ ಹೊಳೆ ಮಧ್ಯದ ಬಂಡೆ ಸವೆತದ ಹಾಗೆ
ಬಟ್ಟೆ, ಬಟ್ಟೆ ತೊಳೆದವರು, ಈಜಿ ಸುಸ್ತಾಗಿ ವಿಶ್ರಮಿಸಿದವರು
ಬಂಡೆಯ ನುಣಪಿಗೆ ಕಾರಣ ಧ್ಯಾನಿಸಿದವರು ಯಾರು, ಯಾರು?
(ಒಗೆತ)

ಇಷ್ಟಾದರೂ ಕವಿ ಮನಸ್ಸು ಧೃತಿಗೆಟ್ಟಿಲ್ಲ. ಕವಿಯ ಬಲವಾದ ನಂಬಿಕೆ ನುಡಿಯುವುದು ಏನೆಂದರೆ,

ದೇಶ ಕಾಲಗಳಾಚೆ, ಕೋಶವ್ಯಾಪ್ತಿಯ ಮೀರಿ
ವಿಕಸಿಸುವ ಸಹಜ ಆಂತರ್ಯದಲ್ಲಿ
ಯುದ್ಧ ಭೂಮಿಯ ನಡುವೆ ಗೀತೆ ದಕ್ಕಿದ ಹಾಗೆ

ಸಂತೆಯೊಳಗಿಂದಲೇ ಸಂತ ಎದ್ದು ಬರಬೇಕು
ಉಳಿದ ಪ್ರತಿಮೆಗಳಿಗಾದರೂ ಜೀವ ತುಂಬಬೇಕು

(ಉಳಿದ ಪ್ರತಿಮೆಗಳು)

ಉಳಿದ ಪ್ರತಿಮೆಗಳ ಬಗೆಗೆ ಆಶಾವಾದದಿಂದಿರುವ ಕವಿಗೆ ಕಾಲವೇ ಉತ್ತರಿಸುವುದು ಸದ್ಯದ ಇಂತ ಭರವಸೆಯೇ ನಮ್ಮ ನೆಲವನ್ನು ಕನ್ನಡ ಕಾವ್ಯದ ಹಾದಿಯನ್ನು ಬೆಚ್ಚಗಿಡಬಲ್ಲದು.

## ಅಧ್ಯಾಯ – ೩

# ಹೆಜ್ಜೆ ಇಕ್ಕಿರುವ ಕವಿಗಳು – ಕವಿತೆಗಳು

ಕಳೆದ ಎರಡು ದಶಕಗಳಲ್ಲಿ ಪ್ರಕಟವಾಗಿರುವ ಕನ್ನಡ ಕಾವ್ಯವು ಪ್ರಜ್ಞೆಗೆ ತರುತ್ತಿರುವ ಒಂದಂಶ; ಅದು ಈ ಕಾಲದ ಹಿಂಸೆಯೇ ಆಗಿದೆ. **ಜಿ.ವಿ.ಆನಂದಮೂರ್ತಿ**ಯವರ ಮೊದಲ ಕವನ ಸಂಕಲನ 'ನೀರಗಂಧ' ಇಂತಹ ಹಿಂಸೆಯ ಆವರ್ತನವನ್ನೆ ಕೇಂದ್ರವಾಗಿರಿಸಿಕೊಂಡಿದೆ. ಒಂದೇ ಮೂಡಿನಲ್ಲಿ ಒಂದೆ ವಿಷಯದ ಬಗೆಗೆ ಗಮನವಿಟ್ಟಂತಿರುವ ಇಲ್ಲಿನ ಕವಿತೆಗಳನ್ನು ಓದುವಾಗ ಪ್ರಸ್ತುತ ಕಾವ್ಯ ಏಕೆ ಹಿಂಸೆಯತ್ತ ತನ್ನ ದೃಷ್ಟಿ ಕೊಟ್ಟಿದೆ? ಮತ್ತು ಒಟ್ಟು ವ್ಯವಸ್ಥೆಯಲ್ಲಿ ಹಿಂಸೆಯ ಸ್ವರೂಪ ಎಂಥದ್ದು? ಎಂಬ ಪ್ರಶ್ನೆಗಳನ್ನು ಕೇಳಿಕೊಳ್ಳುವಂತೆ ಮಾಡುತ್ತದೆ.

ಈ ನೆಲಕ್ಕೆ ಎರಡು ರೆಕ್ಕೆಗಳಿದ್ದರೆ
ಸುರಿಯುತ್ತಿರಲಿಲ್ಲ ಅದರ ಮೈಯಿಂದ ಇಷ್ಟೊಂದು ರಕ್ತ

(ಬಹುರೂಪಿ)

ಹೀಗೆ ಹಲುಬುವ ಇಲ್ಲಿನ ಕವಿ; ತನ್ನ ತೇವದ ಕಣ್ಣುಗಳಲ್ಲಿ ತುಂಬಿಕೊಂಡಿರುವ ಮರೆಯಲಾಗದ ಚಿತ್ರವೆಂದರೆ,

ಅನ್ನ ಬೇಡುವ ಹಸಿದ ತಣಿಗೆಗಳ ಮುಂದೆ
ಭೀತಿ ಗರ್ಭವ ಬಗೆದು ಬಂದ ತ್ರೀಶೂಲಧಾರಿಗಳು
ಬಸುರಿ ಬಾಣಂತಿಯರ ಕರುಳ ಬಗೆದರು
ತೊಟ್ಟಿಲ ಕೂಸುಗಳ ಸೊಲ್ಲಡಗಿಸಿದರು

(ಧರೆಗೆದೊಡ್ಡವರು)

ತಿರುವುಗಳ ದಾರಿ ಸವೆಸಿದರೂ
ಮುಗಿಯದ ಕಗ್ಗತ್ತಲ ದಾರಿ
ಯಾರು ಆರಿಸಿದರೋ ಅಲ್ಲಿ ಉರಿವ ನಂದಾದೀಪವನ್ನು

(ದಾಹ)

ಮನೆಯ ತಲೆಬಾಗಿಲಲ್ಲಿ ಬಿದ್ದ ರಕ್ತದ ಕಲೆಗಳನ್ನು
ಅಳಿಸಲಾರದು ಆತ್ಮವಿಲ್ಲದ ನಿಮ್ಮ ಮಂತ್ರಘೋಷ
ನೀವು 'ಓದೋದು ಶಾಸ್ತ್ರ, ಇಕ್ಕೋದು ಗಾಳ'
ನಿರ್ದಯಿ ಕೊಲೆಪಾತಕರ ಒತ್ತೆಯಾಳುಗಳು ನಾವು

(ತೇವವಿಲ್ಲದ ಕಣ್ಣು)

ಕಲ್ಯಾಣದ ಕೇರಿಗಳಲ್ಲಿ ಇಟ್ಟಾಡುವ ನೆತ್ತರು
ಗೆದ್ದಲು ಹತ್ತಿದ ವಚನಗಳ ಕಟ್ಟು
ಜಂಗಮದ ದೇವಾಲಯಕ್ಕೆ ಈಗ ಸ್ಥಾವರದ ಕಳಶ
ಶರಣರ ಮಹಾಮನೆಗೆ
ಈಗ ಯಾವ ದಾರಿಯೂ ಇಲ್ಲ! (ಬಿಡಿ ಪದ್ಯದಿಂದ)

ಎಂದು ನೊಂದುಕೊಂಡು ಈ ನೆಲದಲ್ಲಿ ಸುರಿದಿರುವ ರಕ್ತವ ತೊಡೆದು ಹಾಕಲು ಧರೆಗೆದೊಡ್ಡವರಾದ ಮಂಟೇಸ್ವಾಮಿಯನ್ನು, ವಚನಯುಗವನ್ನು ಕವಿ ಮನಸ್ಸು ನೆನೆಯುತ್ತದೆ. ಇಂತಹ ಆಲೋಕನಗಳ ನಡುವೆಯೂ ಇಲ್ಲಿ ಕವಿತೆಗಳು ಕೃಷಿ ಸಮುದಾಯದ ಚಹರೆ, ಗ್ರಾಮ್ಯ ನುಡಿಗಟ್ಟು, ನಂಬುಗೆಗಳನ್ನು ಧರಿಸಿಕೊಂಡಿದೆ.

ಹಾರೋಗೇರಿಯಲಿ
ಹಗಲು ಸತ್ತರೆ ಅಕ್ಕಿಯಿಲ್ಲ
ಕುಂಬಾರಗೇರಿಯಲಿ
ಇರುಳು ಸತ್ತರೆ ಎಣ್ಣೆಯಿಲ್ಲ
(ತೂಗು ಮೋಡಗಳ ಬಗೆ ಮಾಡಿ)

ಜನಪದ ಕಾವ್ಯಗಳಲ್ಲಿ ಸಾಮಾನ್ಯವಾಗಿ ಬರುವ ಲಯವನ್ನು ಮುರಿದು ಕಟ್ಟಿರುವುದು ಹೀಗೆ,

ಕಾಳರಾತ್ರಿಯೊಳಗೆ
ಕೀವು ಸುರಿವ ರಣಗಾಯದ ದಾರಿ
ಮೂಗುತ್ತದೊಳಗೆ ಬಿಚ್ಚುಗತ್ತಿಯ ಪಾರ
ಬೆಟ್ಟ ಹತ್ತಿ ಬೆಟ್ಟ ಇಳಿದರೂ ತೀರಲಾರದ ಸಾಲ
(ಜವಳಿ ಕಟ್ಟೆಯ ಜೀವಕಳೆ)

ಈ ನೆಲದ ನಂಟಿನೊಂದಿಗೆ ತನ್ನ ಇರುವನ್ನು ಕಂಡುಕೊಂಡಿದೆ ಅನ್ನಿಸುವ ಇಲ್ಲಿನ ಕವಿತೆಗಳು ನೆಲದ ಜೀವರಾಶಿಗಳ ಬೆಚ್ಚನೆಯ ಬಾಳುವೆಗಾಗಿ ನಿಟ್ಟುಸಿರು ಬಿಟ್ಟಿದೆ.

ರಣಗಾಳಿಗೆ ಗೂಡು ಕುಸಿಯದಿರಲಿ
ನೆಲೆದಪ್ಪಿದ ಮರಿಗಳು ತಾಯಿಗೂಡು ಸೇರಲಿ
ಓಡಿ ಬಂದ ಕರುವಿಗೆ ತಾಯಿಕೆಚ್ಚಲು ತುಂಬಿರಲಿ
ದುಡಿವ ಸೂರ್ಯ-ಚಂದ್ರರಿಗೆ ತುಸು ತಂಪು ನೆರಳಲಿ
(ಬಿಕ್ಕುವಿನ ಪ್ರಾರ್ಥನೆ)

ಗುರುವೇ

ಉರಿವ ಧರೆಯಲ್ಲಿ

ತುಸು ಸಾಂತ್ವನದ ತಾಯಿನೆರಳು ಯಾವಾಗಲೂ ಇರಲಿ

(ಮಂದಹಾಸದ ಸಂಜೆ)

ಇಂತಹ ಪ್ರಾರ್ಥನೆ ಕವಿಯದ್ದೂ ಆಗಿ ನಮ್ಮ ಕಾಲದ್ದೂ ಆಗಿಬಿಡುತ್ತದೆ. ಗ್ರಾಮೀಣ ಬದುಕನ್ನು ಅಲ್ಲಿಯ ದುಃಖವನ್ನು, ಆಧುನಿಕತೆಯೊಂದಿಗೆ ಬೆರೆತುಹೋಗುತ್ತಿರುವ ಹಿಂಸೆ ಮತ್ತು ರೈತರ ಬವಣೆಗಳನ್ನು ಕುರಿತು ಇವರ ಕವಿತೆಗಳಿವೆ.

'ಎಡವಟ್ಟು ಬದುಕಿನ ಲಯಗಳು' ಕವನ ಸಂಕಲನ ಪ್ರಕಟಿಸಿರುವ ಕವಿ **ಎಚ್.ಆರ್.ರಮೇಶ್** ನಮ್ಮ ನಡುವೆ ಇರುವ ಕವಿಗಳಲ್ಲಿಯೇ ಭಿನ್ನವಾಗಿ ಕಾಣುತ್ತಾರೆ. ಇದಕ್ಕೆ ಪ್ರಮುಖ ಕಾರಣ ಅವರ ಕವಿತೆಗಳು ಸಮಕಾಲೀನರಿಗಿಂತ ಬೇರೆಯಾಗಿರುವುದೇ ಆಗಿದೆ.

ಕವಿತೆ

ಅಪ್ಪನ ಹೆಣ ಹೊತ್ತ ಹೆಗಲ ನೋವಾಗಿರಲು

ಅವಳ ಕೆನ್ನೆಯ ಹೂವುಗಳು ಮದ್ದಾಗಿರಲು

(ಶರಣೆಂದವೋ ಪದವು ಶರಣೆಂದವೋ)

ಸದ್ಯದ ಕನ್ನಡ ಕವಿತೆಯ ಇಕ್ಕಟ್ಟನ್ನು ವ್ಯಕ್ತ ಮಾಡುವ ರೀತಿ ಮನಸ್ಸಲ್ಲಿ ಉಳಿಯುವಂತದ್ದು. ವ್ಯವಸ್ಥೆಯನ್ನು ಅದರ ಎಲ್ಲಾ ವೈರುಧ್ಯಗಳನ್ನು ದಾಖಲಿಸುವ ಕವಿ ಅನುಸರಿವುದು ಪ್ರತಿಮಾ ವಿಧಾನದಲ್ಲಿ. ಕಳೆದ ಒಂದೂವರೆ ದಶಕದ ಜಾಗತಿಕ ಪಲ್ಲಟಗಳನ್ನು ಕಾವ್ಯದಲ್ಲಿ ಹಿಡಿದಿಡುವ ಪ್ರಯತ್ನವೂ ಇಲ್ಲಿ ನಡೆದಿದೆ. ಸಾಹಿತ್ಯ ಮತ್ತು ಸಮಾಜದ ಮುಖ್ಯ ಕೇಂದ್ರದಲ್ಲಿಯೇ ಈ ಕವಿಯ ಕವಿತೆಗಳಿವೆ.

ಮನುಕುಲದಕರುಳ ಕಿವುಚುವಂಥ

ಸುನಾಮಿ

ಮತ್ತು

ಮಸೀದಿ ಮಂದಿರಗಳೊಳಗೆ

ರಕ್ತದಲಿ ಬರೆದಿರುವ

ಪವಿತ್ರ ಗ್ರಂಥಗಳಿದ್ದಾವೆ

ಅದಕ್ಕೆ. . . . . (ಪ್ರೀತಿ ಏಕೆ ಭೂಮಿ ಮೇಲಿದೆ)

ಕಾಶ್ಮೀರದ ಆಸ್ಪತ್ರೆಗಳಲಿ

ಬ್ಲಡ್ ಬ್ಯಾಂಕ್‌ಗಳೇ ಇಲ್ಲ
ಅಯೋಧ್ಯೆ ಪಟ್ಟಣಕೆ
ಧರ್ಮದ ಕ್ಯಾನ್ಸರ್
(ಗುರು ಅಲ್ಲಮಪ್ರಭು ದೇವರಿಗೊಂದು ಗುಪ್ತ ಪತ್ರ)

ಕಲ್ಲ ಪೂಜಿಸುತ್ತಲೇ ಕಲ್ಲ ಎದಿಯೊಳಗೆ
ಹೂವು
ಊರಗಡಿ ದಾಟದೆಯೂ ನಭೋ ಮಂಡಲ
ಕನಸು
ಒಳ್ಳು ಬದುಕಾಗಿ
ಒನಕೆ ಕಾಲವಾಗಿ
ಜೀವವ
ಭತ್ತವಾಗಿಸಿ ಕುಟ್ಟಿದ ಪರಿಗೆ
ಶರಣು ಗುರುವೇ ಶರಣು. . .
. . . . . . . . . . . .
ಬದುಕು ಡಿಸೆಂಬರ್-6
ಆಗುತ್ತಿರುವ ಪರಿಗೆ
ಸಾಕು ಸಾಕೆನ್ನುವ ಗುರುವೆ ಸಾಕೆನ್ನುವೆ.. . . .
(ವಚನ)

ನ್ಯೂಟನ್ನನ ಕಾಲದಲ್ಲಿ
ತಲೆ ಮೇಲೆ ಬೀಳುತ್ತಿದ್ದವು ಸೇಬು
ಸೇಬಿಗೂ ಭೂಮಿಗೂ
ಕರುಳ ಬಳ್ಳಿಯ ಅನುಬಂಧ
ಈ ಕಾಲದಲ್ಲಿ
ಸೇಬು ಸೇಬಲ್ಲ ಭೂಮಿ ಭೂಮಿಯಲ್ಲ
ಕರುಳಿಗೂ ಪ್ಲಾಸ್ಟಿಕ್ ಸರ್ಜರಿ
(ಪೊಯಟ್ರಿ ಗ್ಯಾರೇಜು)

ಕಲ್ಲ ಕನಕನ ಮುಂದೆ ಕೃಷ್ಣನಿಗೆ ವಜ್ರಕಿರೀಟ
ಬಿದಿರ ಹೂವಿಗೆ ಬೆದರಿ ಹಳ್ಳಿ ಹಳ್ಳಿಯೇ ಗುಳೆ
ಪಾರ್ಲಿಮೆಂಟಿನಲಿ ಮಹಾಕಾವ್ಯ

ಸಿನಿಮಾ ಮಾಡಿದರೆ ಸ್ವರ್ಣ ಕಮಲ!

. . . . . .  . . . . . . .  . . .

ಬಸವನ ಹುಳು ಬುಲ್ಡೋಜರ್ ಅಡಿಯಲ್ಲಿ

ಮೆಲ್ಲಮೆಲ್ಲನೆ ಸರಿಯುತ್ತಿದೆ

(ಅವ್ಯವಸ್ಥಿತ ಕವನ)

ಇಂತಹ ಕವಿತೆಗಳು ಸಾಮಾಜಿಕ ಅಸ್ಥಿರತೆಯ ಚಿತ್ರಗಳನ್ನು ಕೊಡುವ ಈ ಕವಿ ಪರಸ್ಪರ ಮುಖಾಮುಖಿಯಾಗಿ ಸಂಗತಿ ವಿಸಂಗತಿಗಳನ್ನು ಇಟ್ಟು ಜಪ್ತಿ ಮಾಡುತ್ತಾರೆ. ಇವುಗಳನ್ನೇ ರೂಪಕಗಳಲ್ಲಿ ಮೂಡಿಸಿ ಅನುಭಾವಿಕನಂತೆ ವೈಚಾರಿಕನಂತೆ ಮಾತನಾಡುವ ಕವಿ; ಕವಿತೆಯ ಮೂಲಕ ತೋರುವ ಕಿಂಡಿಯಲ್ಲಿ ಪ್ರಸ್ತುತ ರಾಜಕೀಯ– ಪ್ರಭುತ್ವದ ಒಳ ಸಂಬಂಧಗಳು ಅಡಗಿವೆ. ಬದುಕು 'ಡಿಸೆಂಬರ್ 6' ಆಗುತ್ತಿರುವ ಭಯವೇ ಕವಿಯನ್ನು ಮತ್ತೆ ಮತ್ತೆ ಇಲ್ಲಿ ಕಾಡಿದೆ. ಅಯೋಧ್ಯೆ ಪಟ್ಟಣಕ್ಕೆ ಅಂಟಿಕೊಂಡಿರುವ ರಕ್ತದ ಕ್ಯಾನ್ಸರ್, ಕರುಳಿಗೂ ಪ್ಲಾಸ್ಟಿಕ್ ಸರ್ಜರಿ, ಈ ನಡುವೆ ಪ್ರೀತಿ ಎಕೆ ಭೂಮಿ ಮೇಲಿದೆ ಎಂಬ ಪ್ರಶ್ನೆ, ಡಿಸೆಂಬರ್ 6, ಇವೆಲ್ಲಕ್ಕೂ ಪರಸ್ಪರ ಸಂಬಂಧವಿದೆ. ಸಮಾಜ ಮತ್ತು ಕಾವ್ಯಕ್ಕೆ ಇರುವ ಏಕಸೂತ್ರವನ್ನು ಕವಿ ಈ ಮೂಲಕ ಕಾಣಿಸುತ್ತಾನೆ. ಮತೀಯ ಭಾವನೆಯನ್ನು ವಿಸ್ತರಿಸುವ, ಗಟ್ಟಿಗೊಳಿಸುವ ಕ್ರಿಯೆ ಗೋಚರಿಸುತ್ತಿರುವ ಘಟನೆಗಳು ದೈನಂದಿನ ನಡೆಯುತ್ತಿರುವುದರ ನಡುವೆ ಕವಿಯ ತಳಮಳ ಕವಿತೆಗಳಲ್ಲಿ ಒಡಮೂಡಿವೆ.

ಇದೇ ರೀತಿ ನಗರ ಮತ್ತು ನಾಗರಿಕತೆಯ ಪ್ರಕ್ರಿಯೆಗಳನ್ನು ಒಳಗೊಳ್ಳುತ್ತಾ ಬರೆಯುತ್ತಿರುವ ಕವಿಗಳು ನಮ್ಮ ಮುಂದೆ ಕಾಣಿಸುತ್ತಿದ್ದಾರೆ. ಅಂತಹ ಕೆಲವರಲ್ಲಿ **ಅಂಕುರ್ ಬೇಟಗೇರಿ** ಒಬ್ಬರು. 'ಹಿಡಿದ ಉಸಿರು', 'ಇದರ ಹೆಸರು' ಕವನ ಸಂಕಲನಗಳನ್ನು ಪ್ರಕಟಿಸಿರುವ ಇವರ ಕವಿತೆಗಳು ಹಲವು ಕಾರಣಗಳಿಗೆ ಮುಖ್ಯವಾಗುತ್ತದೆ.

ಈ ಅರ್ಥಂಬರ್ಥ ಪ್ರಪಂಚದಲ್ಲಿ

ನಾನು ಬರೆದ ಪ್ರತಿಯೊಂದು ಕವನವೂ

ಮಧ್ಯದಲ್ಲಿಯೇ ತನ್ನ ಕುತ್ತಿಗೆಯನ್ನು ತಾನೇ ಹಿಸುಕಿಕೊಂಡು

ಉಸಿರುಗಟ್ಟಿ ಸಾಯುತ್ತಿದೆ

. . . . . .  . . . . . . . . . . .

ನಮ್ಮದಲ್ಲದ ವಿಶ್ವದಲ್ಲಿ ಚದುರಿಹೋದ ನಾವು

ನಮ್ಮ ನೆರಳುಗಳ ಮೂಲಕ ಕಥೆ ಕಟ್ಟಿ

ಕಳೆದುಹೋದ ಜೀವನದೊಳಕ್ಕೆ
ಮತ್ತೆ ನಡೆಯುತ್ತೇವೆ

(ಈ ಅರ್ಥಂಬರ್ಥ ಪ್ರಪಂಚದಲ್ಲಿ)

ಕಳೆದುಹೋದ ಜೀವನದೊಳಕ್ಕೆ ನಡೆಯಲು ಹವಣಿಸುವಲ್ಲಿ ಈ ಕವಿಯ ಕವಿತೆ ಪ್ರಯತ್ನಿಸುತ್ತದೆಯಾದರೂ ಸದ್ಯದ ಕಾವ್ಯದ ಮಿತಿಯನ್ನು ಸೂಚಿಸುತ್ತಿದೆ. ಭಾಷಿಕ ರಚನೆಯ ಮೂಲಕ ಕಟ್ಟಿಕೊಡುವ ಲೋಕ ವಾಸನೆಗಳು ಪೂರ್ಣವಾಗದೆ ಮಧ್ಯದಲ್ಲಿಯೇ ಕಳೆದುಹೋಗುತ್ತಿರುವ ಅನುಭವವಿಲ್ಲಿ ವ್ಯಕ್ತವಾಗಿದೆ.

ಖುಷಿಯಲ್ಲಿ ಕವಿ ಬರೆಯುತ್ತಾನೆ
ಖುಷಿಯನ್ನು ಹಿಡಿದಿಡುವ ಯಾವ ಶಬ್ದವೂ
ಜಗತ್ತಿನಲ್ಲಿಲ್ಲ
ಮನುಷ್ಯನ ದೇಹದಿಂದ ಖುಷಿ ಹೊಮ್ಮುತ್ತದೆ
ಆದರೆ ಅದನ್ನು ಪೆಟ್ಟಿಗೆಯಲ್ಲಿಟ್ಟು ಕೂರಲು
ಪ್ರತಿಕ್ಷಣ ಅವನು ಒದ್ದಾಡುತ್ತಾನೆ

(ಖುಷಿ)

ಮನುಷ್ಯನು ಸಂತೋಷದಂಥ ಅನುಭವವನ್ನು ಆಗಿಸಿಕೊಳ್ಳಲು ನೂರಾರು ದಾರಿ ಹಿಡಿಯುತ್ತಾನೆ. ಶತಪಥ ತಿರುಗುತ್ತಾನೆ. ಸಂತೋಷದ ಗಳಿಗೆಯೊಂದು ಕಳೆದು-ಹೋಯಿತು ಎಂದು ಹಲುಬುತ್ತಿರುತ್ತಾನೆ. ಆದರೆ ಕವಿ ಕಾಣಿಸುವ ನಿಜ ಭಾವಸತ್ಯದಾಚೆಗೂ ಗಮನಸೆಳೆಯುತ್ತದೆ. ನಿತ್ಯ ಆಗುವ ಹೊಸತಾಗುವ ಪ್ರಕ್ರಿಯೆಯ ಸಂತೋಷವೆಂದು ಕಾಣಿಸುವ ಕವಿ; ಅದನ್ನು ಹಿಡಿದಿಟ್ಟುಕೊಳ್ಳಲು ಒದ್ದಾಡುವುದನ್ನು ಕಂಡಾಗ ನಾವು ಭಾವಿಸುವ ಸಂತೋಷದ ಪರಿಕಲ್ಪನೆ ಬದಲಾಗುತ್ತದೆ.

ನಾನು ಬಿಟ್ಟ ಉಸಿರು ಯಾರು
ತೆಗೆದುಕೊಳ್ಳುತ್ತಾರೋ, ನಾನು ಯಾರು ಬಿಟ್ಟ
ಉಸಿರು ತೆಗೆದುಕೊಂಡಿದ್ದೀನೋ
ಗೊತ್ತಿಲ್ಲ
ಉಸಿರಲ್ಲೇ ನಮ್ಮ ಜೀವದ ಬಣ್ಣವನ್ನು
ಎಲ್ಲೆಲ್ಲೂ ಚೆಲ್ಲಿಬಿಡುವ ನಾವು
ನೆಲದ ಮೇಲೆ ಗೆರೆ ಕೊರೆದುಕೊಂಡು
ನಮ್ಮ ಅಸ್ತಿತ್ವವನ್ನು ಅದರಲ್ಲಿ ಮುದುಡಿ ಮಡಿಚಿಟ್ಟು
ನಿದ್ದೆಗೆಟ್ಟು ಕಾವಲು ಕಾಯುವುದೇಕೇ? (ಹರಡು)

ಅನುಭಾವಿಕ ನೆಲೆಯ ಇಂತಹ ಪ್ರಶ್ನೆ ಹುಟ್ಟಿರುವುದು ವರ್ತಮಾನದ ಎಲ್ಲ ಒತ್ತಡ-ಅಸ್ಥಿರತೆಯ ನಡುವೆ ಎಂಬುದು ಇಲ್ಲಿ ಗಮನಾರ್ಹ. ನಗರದಲ್ಲಿ ವಾಸಿಸುವ ಕವಿಯೊಬ್ಬ ಹೀಗೆ ಅಂದುಕೊಳ್ಳುತ್ತಿರುವುದರ ಹಿಂದೆ ನಮ್ಮ ಕಾಲದಲ್ಲಿ ತಲೆ ಎತ್ತಿರುವ ಹಲವು ಸಮಸ್ಯೆಗಳು ಕಣ್ಣೆದುರಿಗೆ ಬರುತ್ತವೆ. ಜಾತಿಯ ಗೆರೆ, ಧರ್ಮದ ಗೆರೆ, ಸಾಮಾಜಿಕ ಅಸಮಾನತೆಯ ಗೆರೆ, ಗಂಡು-ಹೆಣ್ಣು ನಡುವಿನ ಅಹಂಭಾವದ ಗೆರೆ ಇಂತಹ ಹಲವು ಗೆರೆಗಳಿಂದ ಮನುಷ್ಯನ ಹೃದಯ ಚಿಕ್ಕದಾಗಿಯೇ ಉಳಿದುಬಿಡುವ ಆತಂಕ -ಪ್ರಶ್ನೆ ಈ ಕವಿತೆಯ ಒಡಲಲ್ಲಿದೆ.

ಬಣ್ಣ ಸುಲಿಯುತ್ತಿರುವ ನನ್ನ ರೂಮಿನ ಗೋಡೆಯೊಳಗೆ
ಕುಡಿಯುವ ನೀರಿನ ಪೈಪೊಂದು ಒಡೆದುಹೋಗಿದೆ
ಮಧ್ಯರಾತ್ರಿ ೩ರ ನಿಶ್ಯಬ್ದದಿಂದ ಅದು
ನನ್ನ ಕವಿಯೊಳಕೆ ಜುಳುಜುಳು ಎಂದು
ಹರಿಯಲು ಶುರುಮಾಡಿದಾಗ
ಒದ್ದೆಯಾದ ಗೋಡೆಯ ಮೇಲೆ ನನ್ನ ಕೈ ಇಡುತ್ತೇನೆ
ಗೋಡೆಯೊಳಗೆ ನೀರು ಹರಿಯುತ್ತಿರುವಂತೆ
ಕಾಲ ನನ್ನಲ್ಲಿ ಹರಿಯುತ್ತಿರುವುದು
ನನಗಾಗ ಕೇಳಿಸುತ್ತದೆ

(ಮಧ್ಯರಾತ್ರಿ ೩)

ಸೃಷ್ಟಿಯ ಕ್ರಿಯೆಗಳಾದ ಹಗಲು-ರಾತ್ರಿಯ ಮಧ್ಯೆ ನಿಂತಿರುವ ಕವಿ; ಕಾಲದ ಹರಿವನ್ನು ಕೇಳಿಸಿಕೊಳ್ಳುವ ಈ ಕವಿತೆಯ ಪ್ರಯತ್ನ ಒಂದು ಅನುಭವಜನ್ಯವಾಗಿ ಮೂಡಿಸಿರುವ ಶಿಲ್ಪವಾಗಿದೆ. ಕೋಣೆಯ ಮೂಲಕ ನಗರ ಮತ್ತು ನಗರ ಜೀವನವನ್ನು 'ಮಧ್ಯರಾತ್ರಿ.೩' ಎನ್ನುವ ರೂಪಕಶಕ್ತಿಯಲ್ಲಿ ಕವಿತೆ ನಿಜವಾಗುತ್ತದೆ.

ಇಂತದ್ದೆ ನಗರ ಜೀವನವನ್ನು ವಿವರಗಳ ಮೂಲಕ ಕವಿ **ಡಿ.ವಿ.ಪ್ರಹ್ಲಾದ್** ಕಟ್ಟಿಕೊಡುತ್ತಾರೆ. 'ಡ್ರೀಮರ್', 'ನಾಳೆಯಿಂದ', ಕವನ ಸಂಕಲನಗಳನ್ನು ಪ್ರಕಟಿಸಿರುವ ಇವರ ಕವಿತೆಗಳು ನಗರ ಬದುಕನ್ನು ಕಟ್ಟಿಕೊಡುವ ರೀತಿ ಮುಖ್ಯ.

ಸಿಟಿ ಮಾರ್ಕೆಟ್ಟಿನ ಅಸಂಖ್ಯ
ಪದಗಳು
ಅಪರಿಚಿತ ಮುಖಗಳಲ್ಲೂ
ಪರಿಚಿತ ನೋವು - ಚಹರೆ

(ಪ್ರತೀಕ್ಷೆ)

ಯಾರಿಗೆ ಬೇಕಿದೆ
ಮುಂದಿನವನ ಕತ್ತಲ ಮುಖ
ಹಿಂದಿನವನ ಹೊಸಕಿ ಹೋದ ಕನಸು
ಹಕ್ಕಿಮರಿಯೆ,
ಬಿಡುವು ಯಾರಿಗಿದೆಯೇ?

(ಟ್ರಾಫಿಕ್ಕಿನಿಕ್ಕಟ್ಟಿನಲ್ಲಿ ಹಕ್ಕಿಮರಿ)

ಈ ಮನೆಗೋ ಮೈತುಂಬಾ
ಸ್ವಿಚ್ಚುಗಳು, ನಾನು ಒಂದನ್ನೊತ್ತಿದರೆ
ಅವಳಾರಿಸುತ್ತಾಳೆ ಮತ್ತೊಂದು
ಬೆಳಕು – ಕತ್ತಲು ಏಕತ್ರ ಬದುಕುತ್ತದೆ ಇಲ್ಲಿ

(ದಾಂಪತ್ಯ)

ಅನಿವಾರ್ಯಕ್ಕೆ ಅರಳುವ ತೊಡೆಗಳ ನಡುವೆ
ಜೋಲುತ್ತಾವೆ ಮೌಲ್ಯಗಳು,
ಕಣ್ಣಿಗೆ ರಾಚುವ ಕಟೌಟುಗಳಲ್ಲಿ
ಮುಗುಳುನಗುವ ನಾಯಕರು
ಎದ್ದು ಬರಲಾರರು, ನನ್ನೂರ
ಜಾರಿಣಿಯರ ಕೈ ಹಿಡಿದು
ಹೊಡೆದಾಡಿ ಕಾಪಾಡಲಾರರು

(ಮೆಜಸ್ಟಿಕ್ಕಿನ ಸಂಜೆಗಳು)

ಸೋಡಿಯಂ ದೀಪದ ಕಣ್ಣುಗಳ
ಕಾರ್ಖಾನೆ ಚಿಮಣಿ ಹೊಳ್ಳೆಗಳಿಂದ
ಉಸುರುತ್ತದೆ ದಟ್ಟ ಧೂಮ ನಿತ್ಯ
ಎದೆಗೂಡಿಗೆ ಪ್ಲಾಸ್ಟಿಕ್ಕಿನ ಕವಾಟ
ಅಸಂಖ್ಯ ಹೊಟ್ಟೆಗಳನ್ನು
ತೆರೆದ ಬಾಯಿಗಳನ್ನು ತುಂಬಲಾರದೆ
ಆಕಳಿಸುತ್ತದೆ, ಧಾವಂತದ ನಡುವೆ
ಕಲ್ಲು ಕಟ್ಟಡದ ಮೇಲೆ ಮೂರು ಬಣ್ಣದ ಬಾವುಟ
ದೇವತೆಗೆ ಕಳ್ಳ ಭಕ್ತರ ಕೂಟ

ಪೆಟ್ರೋಲು ಧೂಪದಾರತಿಯಲ್ಲಿ
ಓಡುತ್ತಾವೆ 'ಮೇರಾ ಭಾರತ್ ಮಹಾನ್.......

(ನಗರದೇವತೆ)

ಇಂತಹ ಬಿಡಿ ಬಿಡಿ ಚಿತ್ರಗಳು ನಗರದ ಯಾಂತ್ರಿಕ ಜೀವನವನ್ನು ಅಲ್ಲಿ ಊನಗೊಂಡ ಭಾಗಗಳನ್ನು ಅನುಭವಕ್ಕೆ ತರುತ್ತವೆ. ಮತ್ತೊಂದು ಜೀವದ ಬಗೆಗೆ ಕಿಂಚಿತ್ತೂ ಆಸಕ್ತಿಯಿಲ್ಲದ ಸ್ವಮಗ್ನ ಜೀವನಶೈಲಿ, ಬದುಕಿನ ಅನಿವಾರ್ಯತೆಗೆ ಸಿಲುಕಿ ತೆತ್ತುಕೊಳ್ಳುವ ವೇಶ್ಯೆಯರು, ವಾಹನಗಳು ಹೊರಬಿಡುತ್ತಿರುವ ಹೊಗೆಯೇ ಧೂಪದಂತೆ ಕಾಣುತ್ತಿರುವ ವೈಚಿತ್ರ್ಯ ಎಲ್ಲವೂ ವಿಕೋಪದಲ್ಲಿ ಚಲಿಸುತ್ತಿವೆ. ಕವಿ ಕಾಣಿಸುವ ವೈದೃಶ್ಯದಲ್ಲಿ ಕವಿತೆಯ ಮುಖೇನ ನಿಜದ ನೆಲೆಯ ಹುಡುಕಾಟವು ಇಲ್ಲಿ ನಡೆದಿದೆ. ಗ್ರಾಮ ದೇವತೆಗನ್ನಷ್ಟೆ ಕಂಡು ಕೇಳಿದ್ದ ನಮಗೆ ನಗರದೇವತೆಯ ದರ್ಶನ ಮಾಡಿಸುತ್ತಾನೆ ಕವಿ. ಶಿಥಿಲ ಪಾಯದ ಮೇಲೆ ನಾಗಾಲೋಟದ ನಗರದ ಬದುಕು ಚಲಿಸುತ್ತಿರುವ ಧಾವಂತವನ್ನು ಈ ಕವಿತೆಗಳಲ್ಲಿ ಕಾಣಬಹುದು.

ಕಳೆದ ಶತಮಾನದ ಮುಖ್ಯ ಕವಿ ಪ್ರತಿಭಾನಂದಕುಮಾರ್‌ರವರ ಕಾವ್ಯ ಈ ಇಪ್ಪತ್ತೊಂದನೆ ಶತಮಾನದ ಹಲವು ಕವಿಗಳಲ್ಲಿ ಪ್ರಭಾವ ಬೀರಿರುವುದನ್ನು ಢಾಳಾಗಿ ಕಾಣಬಹುದು. ಹಾಗೆ ನೋಡಿದರೆ ಇಂತಹ ಪ್ರಭಾವವು ಕಾವ್ಯವೊಂದರ ಚಲನಶೀಲತೆಯಲ್ಲಿ ಸಹಜವು, ಆರೋಗ್ಯಕರವೂ ಆಗಿದೆ. ಈ ಹಿನ್ನೆಲೆಯಲ್ಲಿ **ಕೆ.ಅಕ್ಷತಾ**ರವರ ಕವಿತೆಗಳನ್ನು ಉದಾಹರಿಸಬಹುದು. 'ರೆಕ್ಕೆ ಬಿಚ್ಚಿ ಆಕಾಶ ನೆಚ್ಚಿ' ಇವರ ಮೊದಲ ಕವನ ಸಂಕಲನ.

ನನ್ನ ದೇವರೆ
ಬದುಕನ್ನೇ ಕಟ್ಟಿಟ್ಟ
ಬಗ್ಗೆ ಪಶ್ಚಾತ್ತಾಪವಿದೆ
ಬಿಚ್ಚುತ್ತಿರುವುದರ ಬಗ್ಗೆ
ನೆಮ್ಮದಿ ಇದೆ

(ಕಟ್ಟು – ಬಿಚ್ಚು)

ಹೀಗೆ ತನ್ನ ಒಳಗನ್ನು ಬಿಚ್ಚುತ್ತಿರುವುದರ ಬಗೆಗೆ ಈ ಕವಿಗೆ ಆಸ್ಥೆಯಿದೆ. ಕಾವ್ಯದ ಮೂಲಕ ಅಕ್ಕಮಹಾದೇವಿ ಆದಿಯಾಗಿ ಈ ರೀತಿಯಾಗಿ ಹೆಣ್ಣಿನ ಅಂತರಂಗವನ್ನು, ಸಂಕಟವನ್ನು ತೆರೆದಿಟ್ಟಿರುವ ಪರಂಪರೆ ಇಂತಹ ಸಾಲುಗಳನ್ನು ಓದಿದಾಗ ನೆನಪಾಗುತ್ತದೆ.

ನಿನ್ನಂತೆಯೇ ಎಲ್ಲ ಬಿಟ್ಟುಕೊಡಲಾರೆ
ಒಳಗೊಳಗೆ ಜಿಡ್ಡುಗಟ್ಟಲಾರೆ
ರಾತ್ರಿ ನಕ್ಷತ್ರ ಎಣಿಸುತ್ತಾ
ಕಾದಂಬರಿ ಓದುತ್ತಾ
ಕವನ ಕಟ್ಟುವಷ್ಟು
ಚೇತನ ಉಳಿಸಿಕೊಳ್ಳಲು
ಈ ಮನೆಯೊಳಗಿದ್ದೆ ಸಾಧಿಸಲು
ಅತ್ತೆ ನನಗೆ ಅನುವು ಮಾಡಿಕೊಡು

(ಅತ್ತೆಯಲ್ಲಿ ಮನವಿ)

ಹೀಗೆ ಕವಿ ತನ್ನ ಒಳ ಅವಕಾಶದಲ್ಲಿ ಸ್ವಾತಂತ್ರ್ಯವನ್ನು ಮಂಡಿಸುವುದು ಮುಖ್ಯವೆನಿಸುತ್ತದೆ. ತಾನು ಓರ್ವ ಹೆಣ್ಣಾಗಿ ಹೆಣ್ಣಿನಲ್ಲಿ ಇಡುತ್ತಿರುವ ಮನವಿಯ ಹಿಂದೆ ನಮ್ಮ ಕಾಲದ ಪ್ರಜ್ಞೆ, ಶಿಕ್ಷಣಗಳು ಉಂಟುಮಾಡಿರುವ ಅರಿವಿನ ಒತ್ತಾಯವೂ ಕಾಣಿಸುತ್ತದೆ.

ಅಮ್ಮ ಆಸ್ಥೆಯಿಂದ ಮಾಡಿದ
ಉಪ್ಪಿಟ್ಟು ಕೇಸರಿಬಾತು
ತಿಂದು ಎಲ್ಲ ತೊಲಗಿದರು
ಮತ್ತೊಂದು ವಧು ಪರೀಕ್ಷೆಗೆ
ತಯಾರಾಗಿ ನಿಲ್ಲುವಂತೆ
ಅಪ್ಪ ಸೂಚನೆ ನೀಡಿದ್ದಾರೆ
ಪಾಲಿಸುತ್ತಿದ್ದೇನೆ

(ಸೂಚನೆಯ ಪಾಲನೆ)

ಹೆಣ್ಣು ನೋಡಲು ಬರುವವರನ್ನು ಕುರಿತ ಇಂತ ಸಾಲುಗಳು ತಂದೆ-ತಾಯಿಯರ ನೆರಳಲ್ಲಿ ಇರುವುದನ್ನು ಆ ಮೂಲಕವೇ ತನ್ನ ಜಗತ್ತಿನ ಹಾಜರಿಯನ್ನು ಅಕ್ಷರಗಳ ಮೂಲಕ ತೆರೆದಿಡುತ್ತಿರುವುದನ್ನು ಕಾಣಿಸುತ್ತದೆ. ಇವುಗಳ ಹಿಂದೆ ಹೆಣ್ಣಿನ ತೊಳಲಾಟ, ಸಂಕಟಗಳು ಬೆಂಕಿಯಂತೆ ಹುದುಗಿದೆಯಾದರೂ ಕವಿತೆಯಲ್ಲಿ ವ್ಯಕ್ತಮಾಡುತ್ತಿರುವ ಸಂಯಮದ ಭಾವ ಬಂಧುರತೆ ಗಮನ ಸೆಳೆಯುತ್ತದೆ.

ಮಗು ಮಾತು ಶುರುವಾದೊಡನೆ
ಒಗ್ಗಿಕೊಳ್ಳುತ್ತದೆ ಮೌನಕ್ಕೆ
ಅದು ತನ್ನೊಳಗೆ ತಾನೆ

ತಯಾರಿ ನಡೆಸಿರುತ್ತದೆ
ಒಮ್ಮೆಗೆ ಸ್ತಬ್ಧಗೊಳ್ಳುವ
ಬಂಧ ಸಂಬಂಧಗಳಿಗೆ
ತಯಾರಿ ನಡೆಸಿದ ಮಕ್ಕಳೇ
ಪ್ರಯೋಗಿಸಿ ನೋಡುತ್ತಾರೆ
ಖಾತ್ರಿ ಮಾಡಿಕೊಳ್ಳುತ್ತಾರೆ
ಮುರಿದು ಕಟ್ಟುತ್ತಾರೆ
ಕಟ್ಟಿ ಮುರಿಯುತ್ತಾರೆ
ಜೀವಂತವಾಗಿರಿಸುತ್ತಾರೆ
ಈ ಜಗದ ಜಗಮಗವ

(ಮಾತು ಶುರುವಾದೊಡನೆ)

ಸೃಷ್ಟಿಯ ನಂತರ ಬೆಳವಣಿಗೆಯಲ್ಲಿನ ಪಲ್ಲಟಗಳನ್ನು ನಿರ್ಮಾಣಗಳ ನಡಿಗೆಯನ್ನು ಕವಿ ಇಲ್ಲಿ ತೋರುತ್ತಿದ್ದಾರೆ. ಇದನ್ನೇ ಆನ್ವಯಿಕವಾಗಿ ಈ ಕವಿ ತುಳಿದಿರುವ ಕಾವ್ಯದ ಹಾದಿಗೂ ಹೇಳಬಹುದು. ಸ್ತ್ರೀವಾದದ ಮುಂದುವರಿದ ಭಾಗವಾಗಿ ಅಥವಾ ಅದರೊಳಗಿನ ಬಂಧ ಗಟ್ಟಿಗೊಳ್ಳುತ್ತಿರುವ ಸೂಚನೆಯಾಗಿಯೂ ಇಂತಹ ಅಭಿವ್ಯಕ್ತಿ, ಕಾವ್ಯದ ಹಾದಿ ಮುಖ್ಯವೆನಿಸುತ್ತದೆ.

ಈಚೆಗೆ ಕನ್ನಡ ಕಾವ್ಯದಲ್ಲಿ ಪ್ರತಿಮೆ, ರೂಪಕ, ಅಲಂಕಾರಾದಿಗಳನ್ನು ತೊರೆದರೂ, ಕಾಣುವ ಸೃಜನಶೀಲತೆಯಲ್ಲಿ ಕವಿತೆಯನ್ನು ಅನುಭವಕ್ಕೆ ತಂದು-ಕೊಡುತ್ತಿರುವ ಪ್ರಯತ್ನ ನಡೆಯುತ್ತಿದೆ. ಇದಕ್ಕೆ **ಸಂಧ್ಯಾದೇವಿ**ಯವರ 'ಮಾತು-ಚಿಟ್ಟೆ, ಬೆಂಕಿ-ಬೆರಳು, ಮುರಿದ ಮುಳ್ಳಿನಂತೆ ಜ್ಞಾನ' ಉತ್ತಮ ಉದಾಹರಣೆ. ಈ ಸಂಕಲನದ ಕವಿತಾಗುಚ್ಛವನ್ನು ಓದಿದರೆ ಅನುಭವದಿಂದ ಈ ಮಾತು ಹೇಳುತ್ತೇನೆ ಕೇಳಿ ಎನ್ನುವಂತೆ ನಮ್ರತೆಯೇ ಪ್ರಧಾನವಾಗಿ ಕಾಣಿಸುತ್ತದೆ. ತಾನು ಕವಿ ಎಂದು ಪ್ರತಿಷ್ಠಾಪಿಸುವ ಹಪಹಪಿಕೆಗಿಂತ ಬದುಕನ್ನು ಅರಿಯುವ ಪ್ರಕ್ರಿಯೆಯೇ ಇಲ್ಲಿ ಮುಖ್ಯವಾಗುತ್ತದೆ. ಮೌನ ಮತ್ತು ಪ್ರಶಾಂತದ ಪರಿಸರವನ್ನು ಪ್ರವೇಶಿಸಿದಂತೆ ಇರುವ ಕವಿತೆಗಳು ಓದುಗನೊಂದಿಗೆ ಸಂವಾದಕ್ಕೆ ಇಳಿಯುವಷ್ಟು ಶಕ್ತವಾಗಿವೆ.

ಆಧುನಿಕ ಜನ ಜೀವನದಲ್ಲಿ ಸ್ಪರ್ಧೆ, ಕಾದಾಟ, ಪರಸ್ಪರ ಸಂದೇಹ, ಅಭದ್ರತೆ, ಮಹಾತ್ವಾಕಾಂಕ್ಷೆ ಬೇರೂರುತ್ತಿರುವ ವರ್ತಮಾನದಲ್ಲಿ ಮನುಷ್ಯನೊಳಗೆ ಇಳಿಯಬೇಕಾದ ನಿಜವನ್ನು ಕಾಣಿಸುವ ದೃಷ್ಟಿಯಿಂದ ಇವರ ಕವಿತೆಗಳು ಮುಖ್ಯವೆನಿಸುತ್ತದೆ. ಈ ಕವಿಗೆ ಕಾಣ್ಕೆಯೇ ಮುಖ್ಯವಾಗಿದ್ದು ಕಾವ್ಯ ವಸ್ತು, ರೂಪ ಮುಖ್ಯವಲ್ಲ. ಒಂದು ಶಾಂತ

ಮನಸ್ಸಿನಲ್ಲಿ ಲೋಕ ವಾಸನೆಯನ್ನು ಅನುಭವಿಸಿರುವ ನುಡಿಗಟ್ಟೇ ಇಲ್ಲಿ ಸಹಜ ಕವಿತೆಗಳಾಗಿ ಮೈತಾಳುತ್ತವೆ.

ನೀನು ಹೇಳಿಕೊಡು.
ನೀನು ಕಲಿಸಿಕೊಡು.
ನಾನು ಮಗು. ಅಥವಾ ನೀನು ಮಗು
ಯಾರಾದರೂ ಸರಿ. ಆಗಿ
ನೋಡಿಯೇ ಕುತೂಹಲ ತಿಳಿಯಬೇಕು ತಾನೇ!
ಮುಗ್ಧತೆ ಮೇಲು.
ಆದರೆ ಶ್ರೇಷ್ಠವಾದದ್ದನ್ನು ಜ್ಞಾನವೇ ಗುರುತಿಸಬೇಕು

(ಬೆಳವಣಿಗೆಯ ಬೀಜ)

ಇದು ಈ ಕವಿಯ ಸ್ಥಾಯಿಭಾವ. ಮುಗ್ಧತೆಯನ್ನಷ್ಟೇ ತನ್ನದಾಗಿಸಿಕೊಂಡು ಆ ಮೂಲಕ ಎಲ್ಲವಕ್ಕೂ ತೆತ್ತುಕೊಳ್ಳುವ ಗುಣವಿದು. ಕಲಿಯುವ ವಿನಯ, ಮಗುತನದ ಸಹಜಬೆರಗು ಇವನ್ನಷ್ಟೆ ಕವಿ ಆತುಕೊಳ್ಳುವುದು.

ಅವನಿಂದಲೇ ಕಲಿತ ಮಾತನ್ನು
ಅವನಿಗೊಪ್ಪಿಸುವಾಗ
ಹೊಚ್ಚ ಹೊಸತೆಂಬಂತೆ
ಆಶ್ಚರ್ಯದಿಂದ ಹಾಗೂ ಆನಂದದಿಂದ
ಆಲಿಸುವವನು ದೇವರೊಬ್ಬನೇ
ಇನ್ನೊಬ್ಬನು ಇದ್ದರೆ
ದೇವರ ಹಾಗಿರುವನು

(ಇಬ್ಬರು)

ಅಪ್ಪಿಕೊಂಡರೆ ಬೆವರು ಅಂಟಿಕೊಳ್ಳುತ್ತದೆ
ಅಷ್ಟೆ ಮೈಗೆ.
ಗುಣಗಳನ್ನು ಅಪ್ಪಿಕೊಳ್ಳಲಾಗುವುದಿಲ್ಲ
ಅಳವಡಿಸಿಕೊಂಡರಷ್ಟೆ ಅವು
ಅಂತಃಸ್ಥವಾಗುತ್ತದೆ.
ಆಮೇಲೆ ರಕ್ತದಲ್ಲೆ ಹರಿಯುತ್ತದೆ.
ಎಂಥ ಚಂದಾ!
ರಕ್ತ ಎಂದೂ ಬೆವರಿನಂತೆ ಹೊರಗೆ
ಕಾಣಿಸಿಕೊಳ್ಳುವುದಿಲ್ಲ.

(ಮುರಿದ ಮುಳ್ಳಿನಂತೆ ಜ್ಞಾನ : ಪದ್ಯ ಸಂಖ್ಯೆ ೮೧)

ಹೊತ್ತಾರೆ
ಬೆಂಕಿಯ ಹತ್ತಿರ ಕೂತಿದ್ದೆ.
ಅಥವಾ ಬೆಂಕಿಯೇ ಹತ್ತಿರ ಬಂತು.
ಎಂಥಹ ಪ್ರೀತಿ
ದೇಹಕ್ಕೆ ಬೂದಿಯಾಗುವ ಬಯಕೆ!
ಯಾಕೆ ಹೆದರುತ್ತಾರೆ ಜನ ಬೆಂಕಿಗೆ
ಪ್ರಾಣ ಕೊಂಡೊಯ್ಯುವುದೆಂದು.
ಅದು ಶುಚಿ ಮಾಡುತ್ತದೆ. ಶುದ್ಧ ಮಾಡುತ್ತದೆ.
ಬರಿ ಹೊರಗಿಂದಷ್ಟೆ ಅಲ್ಲ. ಒಳಗಿನಿಂದಲೂ.

(ಮುರಿದ ಮುಳ್ಳಿನಂತೆ ಜ್ಞಾನ: ಪದ್ಯ ಸಂಖ್ಯೆ ೩೭)

ನನ್ನ ಕಣ್ಣೀರು
ಕೊರತೆಯ ಗುರುತಲ್ಲ.
ಸುಖ ದುಃಖದ ಪರಿಚಯ ಅದಕ್ಕಿದೆ.
ಗಾಢ ಮೌನದಲ್ಲಿ ಗೂಢವೆಂಬಂತೆ ನೀನು
ಒಳಬಂದು ಅಂತಃಕರಣಗಳ ಮುಟ್ಟಿದಾಗ
ಜೊತೆಯಾಗಿ!

ಇಬ್ಬರ–ಮನಸ್ಸು ಮಾತನಾಡಿತು.
ಬುದ್ಧಿ ಸುಮ್ಮನಾಯಿತು.

ಅಹಂಕಾರವು ಮಗುವಾಯಿತು.
ಚಿತ್ತವು ಕರಗಿ ದ್ರವವಾಯಿತು
ಈ ಹೊತ್ತು ತುಳಿಕಿ ಜಾರಿದ ಕಣ್ಣ ನೀರಿನಲ್ಲಿ
ಮಿಲನದ ಸುಖದ ಬಿಂದುವಿದೆ

(ಬೆಂಕಿ ಬೆರಳು: ಪದ್ಯ ಸಂಖ್ಯೆ ೧೯)

ನೀನು ಗಾಳಿಯಲ್ಲಿ ಕಳಿಸಿದ ಮಾತು
ಮನೆ ಬಾಗಿಲಿಗೆ ಬಂದು ತಲುಪಿದೆ.
ಈಗ ಎಲೆ ಎಲೆಗಳ ಮರ್ಮರದಂತೆ
ಅಥವಾ ಕಾಣದ ಹಕ್ಕಿ ಲೊಚಗುಟ್ಟಿದಂತೆ
ನನ್ನ ಕೈಯಲ್ಲಿದೆ.
ಪ್ರತಿಯೊಂದು ಮಿಲನವೂ ವಿರಹದಲ್ಲಿ
ಅಂತ್ಯವಾಗುತ್ತದೆ
ಮತ್ತು ಪ್ರತಿಯೊಂದು ವಿರಹವೂ ಮಿಲನದಿಂದ
ಪ್ರಾರಂಭವಾಗುತ್ತದೆ.
ಈ ಆದಿ ಅಂತ್ಯವನ್ನು
ನುತಿಸಿ ಸ್ತುತಿಸುವ ಒಂದು ಗೀತೆ
ಬಾಗಿಲಿಂದ ಇಲ್ಲಿ ನನ್ನ ಕೋಣೆಯೊಳಗೇ ಬಂದು
ನನ್ನ ವಿರಹದಲ್ಲಿ ಮಿಲನವಾಗಿದೆ
ಮತ್ತು ಮಿಲನದಲ್ಲಿ ವಿರಹವಾಗಿದೆ

(ಬೆಂಕಿ–ಬೆರಳು: ಪದ್ಯ ಸಂಖ್ಯೆ: ೨೧)

ಬುದ್ಧಿ ಅಹಂಕಾರವನ್ನು ಬೆಳೆಸಲು ಪುಷ್ಟಿ ನೀಡುತ್ತದೆ ಎಂಬುದು ಈ ಕವಿಗೂ ತಿಳಿದಿದೆ. ಹಾಗಾಗಿ ತಿಳುವಳಿಕೆಯಿಂದ, ಗೊತ್ತಿರುವ ಸತ್ಯಗಳಿಂದ, ರೂಢಿಯಾಗಿರುವ ನೋಟಗಳಿಂದ ಸಂಧ್ಯಾದೇವಿಯವರ ಕವಿತೆಗಳು ಹೊರಗೆ ಉಳಿಯುತ್ತವೆ. ಆದ್ದರಿಂದಲೇ ಅವು ಭಿನ್ನವಾಗಿ ಅಷ್ಟೇ ಅಲ್ಲ ಹೊಸ ಕಾವ್ಯದ ಹಂಬಲವನ್ನು ಜೊತೆಗಿರಿಸಿಕೊಂಡಿದೆ. ಅಮಾಯಕತೆಯಿಂದ ಜಗತ್ತನ್ನು ತುಂಬಿಕೊಳ್ಳುವ ಕವಿ ಸಮೃದ್ಧಿಯಾದ ಬದುಕನ್ನು ಧ್ಯಾನಿಸುತ್ತಲೇ ಮನುಷ್ಯ ನಿರ್ಮಿತ ಬಿರುಕುಗಳತ್ತ ನಮ್ಮ ಗಮನ ಕೊಡುವಂತೆ ಕವಿತೆಯಾಗಿಸುತ್ತಾರೆ. ಹಾಗಾಗಿಯೇ ಇಬ್ಬರಲ್ಲಿ ದೇವರನ್ನು, ಅಹಂಕಾರವನ್ನು ಹಗುರ ಮಾಡುವಲ್ಲಿ ಕಣ್ಣೀರಿನ ಪಾತ್ರ ಪರಿಚಯವನ್ನು ಮಾಡಿಕೊಡುವರು. ಉರಿಸುವ ಬೆಂಕಿಯ ಗುಣದಲ್ಲಿಯೂ ಮನುಷ್ಯನ ಒಳಗನ್ನು

ಬೆಳಗುವ ಬೆಳಕನ್ನು ಕಾಣಿಸಬಲ್ಲರು. ವಿರಹದಲ್ಲಿ ಮಿಲನವನ್ನು, ಮಿಲನದಲ್ಲಿ ವಿರಹದ ಭಾವವನ್ನು ಗುರುತಿಸಬಲ್ಲರು. ಕೊನೆ ಎಂದು ಭಾವಿಸಿದ್ದನ್ನು ಆರಂಭವಾಗಿ, ಬೇರ್ಪಡುವಿಕೆಯಲ್ಲಿ ಐಕ್ಯವಾಗುತ್ತಿರುವ ಧಾತುವನ್ನು ಕಾಣಿಸುವಲ್ಲಿ ಈ ಕಪಿಯ ಶಕ್ತಿ ಗೋಚರಿಸುತ್ತದೆ. ಇದು ಸದ್ಯದ ಹೊಸ ತಲೆಮಾರಿನ ಕನ್ನಡ ಕಾವ್ಯದೊಳಗೆ ಭಿನ್ನ ಧ್ವನಿಯಾಗಿಯೂ ತೋರುತ್ತಿದೆ.

ಕೌಟುಂಬಿಕ ನೆಲೆ, ದಮನಿತ ನೆಲೆ, ಎರಡನ್ನು ತನ್ನದಾಗಿಸಿಕೊಂಡಿರುವ ಕವಿ **ಟಿ.ಎಲ್ಲಪ್ಪ**ರವರ ಕವಿತೆಗಳು ನಮ್ಮ ದಲಿತ ಕಾವ್ಯದ ವಿಸ್ತಾರವೆಂದೇ ಕಾಣಿಸುತ್ತದೆ. ರೊಚ್ಚು, ಆವೇಶ, ಸಂಕಟವನ್ನು ರಾಚುವಂತೆ ಹೇಳದಿದ್ದರೂ ತಣ್ಣಗೆ ಕವಿತೆಯಲ್ಲಿ ಸಾಂದ್ರವಾಗಿ ಹಿಡಿದಿಟ್ಟಿರುವ ಗುಣ ಪ್ರಧಾನವಾಗಿ ಕಾಣಿಸುತ್ತದೆ. 'ಕಡಲಿಗೆ ಕಳಿಸಿದ ದೀಪ' ಇವರ ಮೊದಲ ಸಂಕಲನವಾಗಿದೆ.

ನಿಮ್ಮ ಸುತ್ತ
ಹೊಗಳಿಕೆಯ ಹುತ್ತಗಟ್ಟುವ
ಚಿತ್ತ ನನಗಿಲ್ಲ
ನೀವು ಬಾಗಿಸಿದ ಕಡೆ
ಬಾಗುವ ಬೆತ್ತ ನಾನಲ್ಲ
(ಸೊಲ್ಲು)

ಈ ಎಚ್ಚರ ಕವಿಗಿದೆ. ಆದರೆ ಒಣಗಿದ ಕಾಡು ಸೌದೆಯಂತೆ ನಿಧನಿಧಾನ ಕವಿತೆಯೊಳಗೆ ಉರಿದು ಹರಿಯುವಲ್ಲಿ ಈ ಕವಿಯ ಹೆಚ್ಚುಗಾರಿಕೆ ಇದೆ.

ಒಲೆಯಲ್ಲಿ ಬೆಂಕಿ ಉರಿಯುತ್ತದೆ
ಮಡಕೆಯಲ್ಲಿ
ಅನ್ನದ ಅಗುಳುಗಳು
ತಕ- ತಕ ಕುಣಿಯುತ್ತವೆ
ಬದುಕಿನ ಅಸಹಾಯಕತೆಯನ್ನರಿಯದ ಜನ
ಎರಡಕ್ಷರದ ಜ್ಞಾನಪೀಠವನ್ನಿತ್ತು
ಸನ್ಮಾನಿಸುತ್ತದೆ
ಕರುಳಿಗೆ ಕೊಳ್ಳಿಯಿಟ್ಟು ಅಲ್ಲಾಡಿಸುತ್ತದೆ (ಹಸಿವು)

ಕಾಗೆ ಗೂಡಲ್ಲಿ
ಕೋಗಿಲೆ ಮೊಟ್ಟೆ ಇಟ್ಟದ್ದು ತಪ್ಪೇ?

ಕಾಗೆ ಕಾವು ಕೊಟ್ಟದ್ದು ತಪ್ಪೇ?
ಅಕ್ಕಾ ಬೇಗ ಹೇಳೆ? (ಅರಿವು)

ಆರಲು ಬಿಟ್ಟ
ಅನ್ನದ ತಟ್ಟೆಯ ಮುಂದೆ ಕೂತು
ನಾನು ಬಿಸಿಯಾಗುತ್ತೇನೆ
(ಅಮ್ಮ, ಹಸು, ಅನ್ನ)

ಸಮುದಾಯದ ತಲ್ಲಣವನ್ನು ಕವಿತೆಯಲ್ಲಿ ತೆರೆದಿಡುವ ಈ ಕವಿ, ತನ್ನ ಕಾವ್ಯಕ್ಕೆ ಪರಿಚಿತವಾದ ವಸ್ತುವನ್ನೇ ಆರಿಸಿಕೊಂಡಿದ್ದರೂ ಹಸಿವು, ಅರಿವು ಮತ್ತು ಸಂಬಂಧಗಳನ್ನು ನೆನಪು ಮಾಡುವುದು ಕೂಡ ಈ ಕಾಲದ ಕವಿಯ ಜವಾಬ್ದಾರಿ ಎಂಬುದನ್ನು ಮರೆತಿಲ್ಲ.

ಕಳೆದ ಶತಮಾನದ ಕೊನೆಯಲ್ಲಿ 'ಜಾಲಿ ಹೂಗಳ ನಡುವೆ' ಕವನ ಸಂಕಲನ ಪ್ರಕಟಿಸಿರುವ ಕವಿ **ಪೀರ್‌ಭಾಷರ** ಕಾವ್ಯ ಹುಡುಕಾಟವು ಇಂದಿಗೆ ಹೆಚ್ಚು ಮುಖ್ಯವಾಗಿದ್ದು, ಈ ಕವಿಯ ಸೊಲ್ಲನ್ನು ಕೇಳಿಸಿಕೊಳ್ಳಬೇಕಾದ ಅಗತ್ಯವಿದೆ. ಒರ್ವ ಅದಮ್ಯ ಕನಸುಗಾರನಂತೆ ಕಾಣುವ ಕವಿ ನಮ್ಮ ಕಾಲದ ಸವಾಲುಗಳಲ್ಲಿ ಒಂದಾಗಿರುವ ಧಾರ್ಮಿಕತೆಯ ಸಂದರ್ಭದಲ್ಲಿ ಮುಖಾಮುಖಿಯಾಗುವರು. ಧಾರ್ಮಿಕ ವಿಚಾರ-ವೆಂಬುದು ಧರ್ಮಗುರುಗಳಲ್ಲಿ, ರಾಜಕೀಯ ಮುತ್ಸದ್ಧಿ ಎನಿಸಿಕೊಂಡಿರುವವರಲ್ಲಿ, ಪುಂಡರಲ್ಲಿ ವಶವಾಗಿ 'ಟ್ರಂಪ್‌ಕಾರ್ಡ್'ನಂತೆ ಬಳಕೆಯಾಗುತ್ತಿರುವ ವಿಷಾದ, ಜೀವಭಯ ಎಲ್ಲವೂ ಈ ಕವಿಯ ಕವಿತೆಗಳಲ್ಲಿ ಕಾಣಿಸುತ್ತದೆ.

ಬೇಡ
ನೀನು ಬೇಟೆಯಾಡುವುದು ಬೇಡ
ಜೇಡನಂತೆ ಬಲೆನೇಯ್ದು, ಬಲಿಗಾಗಿ ಕಾದು
ದಣಿಯುವುದು ಬೇಡ
ಕಾದ ಆಯುಧಗಳ ತುದಿ
ಚೂಪು ಮಾಡಿ ವಿಷ ಸವರುವುದು ಬೇಡ
ಬೇಡ. . . . ಬೇಡ
ನೀನು ಜೇಡನಂತೆ
ಹಲ್ಲಿಯ ಬಾಯಿಗೆ ಆಹಾರ
ವಾಗುವುದು ಬೇಡ (ಮಾ ನಿಷಾದ)

ರಾಮ
ಮರವಾಗಿದ್ದ
ನೀನೊಂದು ತಪ್ಪಾಗಿ
ಬೇಡನ ಬಾಯಲ್ಲಿ ರಾಮನಾಗಿ
ಸೃಷ್ಟಿಯಾಗಿ ಬಿಟ್ಟೆ
ಬೇಡದ ಎಷ್ಟೊಂದು ತಪ್ಪುಗಳ ಸೃಷ್ಟಿಸಿಬಿಟ್ಟೆ
ಬಿಟ್ಟೆನೆಂದರೂ ಬಿಡದ
ಮಾಯೆಯಾಗಿ ಕಾಡಿಬಿಟ್ಟೆ
ಇರುವ ಸತ್ಯಗಳನ್ನೆಲ್ಲಾ ಸಿತೆಯಾಗಿಸಿ
ಕಾಡಿಗಟ್ಟಿ ಬಿಟ್ಟೆ
(ರಾಮರಾಮ! ನೀನು ಮರವಾಗು)

ಅಲ್ಪಸಂಖ್ಯಾತರ ಮೆಲೆ ಬಿಲಪಂಥೀಯರ ಮೇಲೆ ವರ್ತಮಾನದಲ್ಲಿ ದೂರುಗಳು ದಾಖಲಾಗುತ್ತಲೇ ಇವೆ. ಇಂದಿನ ನಾಗರಿಕ ಜಗತ್ತಿನಲ್ಲಿ ಮಾಧ್ಯಮಗಳ ಪ್ರಭಾವ ಕೂಡ ಸಾಂಸ್ಕೃತಿಕ ಅಪಮೌಲ್ಯೀಕರಣಕ್ಕೆ ಕಾರಣವಾಗುತ್ತಿದೆ. ಇಂತಹ ಸಂದಿಗ್ಧತೆಯಲ್ಲಿ ಬಹುಸಂಖ್ಯಾತರ ಠೇಂಕಾರಗಳು ಹೇಗೋ ಮೇಲುಗೈ ಪಡೆಯುತ್ತಲೇ ಇರುತ್ತವೆ. ಆದರೆ ಅಲ್ಪಸಂಖ್ಯಾತ ಮನಸ್ಸುಗಳು ಜೀವಭಯದಿಂದ ಮುದುಡಿ ಹೊಗುತ್ತವೆ. 'ಮತದ ಹೆಮ್ಮೆ ಬರಡು ಎಮ್ಮೆ', ಎಂಬುದನ್ನು ಬೇಂದ್ರೆ ಬಹಳ ಹಿಂದೆಯೇ ಹೇಳಿರುವರಾದರೂ 'ಮತ', 'ಮತೀಯ ಸಂಗತಿ', ಭಾವೋದ್ರೇಕವಾಗುತ್ತಿರುವ ದಿನಗಳಿವು. ಮಾನವೀಯತೆಯ ಮೆಲೆ ನಡೆಯುತ್ತಿರುವ ಹಲ್ಲೆ ಎಂಥವರನ್ನೂ ಕಂಗೆಡಿಸುತ್ತದೆ. ಇಂತಹ ಸನ್ನಿವೇಶದಲ್ಲಿ ಕವಿ. ಈ ಎಲ್ಲಾ ಸವಾಲುಗಳನ್ನು ಎದುರಿಸುತ್ತಾ ಮುನ್ನಡೆಯುವಲ್ಲಿ ಹಿಂಜರಿಯುವುದಿಲ್ಲ. ಆದರೆ ಆತನ ಕಾವ್ಯ ಹಾದಿ ಮುಳ್ಳಿನ ಹಾಸಾಗಿರುತ್ತದೆ. ಕವಿ ಪೀರ್‌ಬಾಷ ತುಳಿದಿರುವುದು ಇಂತಹ ಹಾದಿ ಹಾಗಾಗಿ ತನ್ನ ಕವಿತೆಯಲ್ಲಿ ವಾಲ್ಮೀಖಿಯ ಸೊಲ್ಲಿನಲ್ಲಿ ಅಡಗಿದ ನಿಟ್ಟುಸಿರು, ಜೀವ ಪ್ರೀತಿಯನ್ನೇ ಈ ಕವಿಯೂ ಪ್ರತಿಪಾದಿಸುತ್ತಿದ್ದಾನೆ. ಈ ಕಾರಣದಿಂದ ಜೇಡದಂತೆ ಬುದ್ಧಿ ನೇಯುವುದರ ಆಚೆಗೆ ನೊಡಬಯಸುವ ಹೃದಯ ಸಂಬಂಧಿ ಈ ಕವಿ. ಸೀತೆಯನ್ನೇ ಪ್ರತಿಮೆಯಾಗಿಸಿ ಇಂದಿನ ಸಂಶಯದ ಬೇಲಿಗಳ ಮಧ್ಯೆ ನಿಲ್ಲಿಸಿ ರಾಮನನ್ನು ಮರವಾಗು ಎನ್ನುವುದು ಮಾರ್ಮಿಕವಾಗಿದೆ.

ಅಕ್ಕಾ ಸೀತಾ
ನಿನ್ನಂತೆ ನಾನು ಶಂಕಿತ

ನಿನ್ನ ಪಾತಿವ್ರತ್ಯದಂತೆಯೇ ನನ್ನ ದೇಶಭಕ್ತಿ
ಸಾಬೀತುಪಡಿಸುವುದಾದರೂ ಹೇಗೆ ಹೇಳು
ಶೀಲ!
. . . . . . . . . . . .
. . . . . . . . . . . . .
ಕಾಲವೇ
ಏಳೇಳು ಕಾಲಕ್ಕೂ
ನನ್ನ ಅಕ್ಕ ತಂಗಿಯರನ್ನು
ಸೀತೆಯರನ್ನಾಗಿಸಬೇಡ
ಕಳಂಕದ ಬೆಂಕಿಯಲ್ಲಿ
ನಮ್ಮನ್ನು ಬೇಯಿಸಬೇಡ

(ಅಕ್ಕ ಸೀತಾ, ನಿನ್ನಂತೆ ನಾನೂ ಶಂಖಿತ)

ಕವಿ ಹೇಳುವ ಇಂತಹ ಇಕ್ಕಳದ ಸ್ಥಿತಿ ಇಂದಿನ ಅಲ್ಪಸಂಖ್ಯಾತರದ್ದು ಆಗಿದೆ. ನಂಬಿಕೆಯ ನೆಲೆಗಟ್ಟು ಕುಸಿದು ಹೋಗುತ್ತಿರುವುದರ ಬಗೆಗೆ ಕವಿ ಕಂಗೆಟ್ಟಿದ್ದಾನೆ. ಕೊನೆಗೂ ಕವಿ ಹೇಳಲು ಬಯಸುವುದೇನೆಂದರೆ,

ದೇವರೆಲ್ಲಾ ಮನುಷ್ಯರಾದ ರಾತ್ರಿ
ಈ ಜಗತ್ತು ಹೊಸ ಹಗಲನ್ನು ಹಡೆಯುತ್ತದೆ.

(ದೇವರೆಲ್ಲ ಮನುಷ್ಯರಾದ ದಿನ)

ಇಂತಹ ಸಂಕಟವನ್ನು ಆತುಕೊಂಡು ಸಮಕಾಲೀನತೆಯನ್ನು ಪರಂಪರೆ-ಯೊಂದಿಗೆ ಹುಡುಕುವಲ್ಲಿ ಕಾವ್ಯದಲ್ಲಿ ತರುವಲ್ಲಿ ಕವಿ **ಮಲ್ಲಿಕಾರ್ಜುನಗೌಡ ತೂಲಹಳ್ಳಿ**ಯವರ ಕವಿತೆಗಳು ಮುಖ್ಯವಾಗುತ್ತದೆ. 'ಶರೀಫನ ಬೊಗಸೆ' ಇವರ ಮೊದಲ ಕವನ ಸಂಕಲನ.

ಕಣ್ಣಕದವಿಕ್ಕಿಕೊಂಡು
ಅಳುತ್ತಿರುವ ಹೃದಯಗಳೇ
ಬನ್ನಿ
ನಿಮ್ಮೆಲ್ಲರಿಗೆ
ಶರೀಫನ ಬೊಗಸೆಯಾಗುವೆ
ಪ್ರೇಮವಂಚನೆಗೊಂಡು

ಬೇಯುತ್ತಿರುವ ಮನಸ್ಸುಗಳೇ
ಬನ್ನಿ
ನಿಮ್ಮೆಲ್ಲರಿಗೆ
ಅಕ್ಕನ ದಾರಿತೋರುವೆ
ಗುಡಿಗುಂಡಾರಗಳಿಗೆ
ಕತ್ತಿಮಸೆವ
ಅಡಿಗಲ್ಲುಗಳೇ
ಬನ್ನಿ
ನಿಮ್ಮೆಲ್ಲರಿಗೆ
ಅಲ್ಲಮನ ಬಯಲ ತೋರುವೆ

(ಶರೀಫನ ಬೊಗಸೆ)

ಶರೀಫ, ಅಕ್ಕ, ಅಲ್ಲಮ್ಮರಂತಹ ದಾರ್ಶನಿಕ ಹಾದಿಯಲ್ಲಿ ಕವಿ ನಡೆಯಲು, ಜನಸಮುದಾಯವನ್ನು ನಡೆಸಲು ಮನಸ್ಸು ಮಾಡುತ್ತಾನೆ. ಆದರೆ ವಾಸ್ತವ ಬೇರೆಯೇ ಇದೆ. ಇದಕ್ಕೆ ಕಾರಣವನ್ನು ಕವಿ ಹುಡುಕಿಕೊಂಡಿದ್ದಾನೆ.

ಪ್ರಭುವೇ
ಇನ್ನೂ ಅರಿತಿಲ್ಲ ನಾವು
ಕೋಗಿಲೆ ಮಾಮರದ ಸಖ್ಯವ
ನೆಲ್ಲಿಕಾಯಿ ಉಪ್ಪಿನ ನಂಟ
ನೆಲದೊಳಗಿದ್ದು ನೆಲವನರಿಯದ
ಮನೆಯೊಳಗಿದ್ದು ಹತ್ತಿರವಿರದ
ಒಡೆದ ಕನ್ನಡಿಬಾಳ
ಕುಡಿಸುವ ಗುಚ್ಚ ಹೇಳಿಕೊಡು
ಇದ್ದು ಈಸಿ ಜೈಸುವ ಬಲವ
ಬೇಡಿಕೊಂಬೆ ನಾನು

(ನಿಯಮ)

ಬೋಧಿಸುವವರೆಲ್ಲಾ ಬುದ್ಧರಲ್ಲ.
ಬೆತ್ತಲಾಗಲು ಇವರಿಗೆ ಧೈರ್ಯವಿಲ್ಲ.
ಬುದ್ಧನ ಶಾಂತಿ
ಬಸವನ ಕ್ರಾಂತಿ

ಇವರ ನಾಲಗೆ ಅಟ್ಟೆಯಲಿ ನಲಿದಾಡಿ
ಮುಗ್ಧರೆದೆಖಾಂಡವವ ದಹಿಸುತ್ತವೆ
ಮಹಲಿನ ಒಂದೊಂದೇ ಮಹಡಿ ಕಟ್ಟುತ್ತವೆ.
ಆಕಾಶಕ್ಕೆದುರಾಗಿ ಕಟ್ಟಿದರೆ ಮಹಡಿ
ಬಯಲಿಗೆ ಹತ್ತಿರವೇನಲ್ಲ.
ಅಕ್ಕನ ಕದಳಿಯಲಿ ಕನಲಿ
ಅಲ್ಲಮನ ಬೆಡಗಿನಲಿ ಬೆಂದು
ಶೂನ್ಯ ಸಂಪಾದಿಸುವ ಇರಾದೆ ಇವರಿಗಿಲ್ಲ
ಇವರ ಹಂಸೆ ಹಾರುವುದಿಲ್ಲ

(ಹಂಸೆ ಹಾರುವುದಿಲ್ಲ)

ವೈಯಕ್ತಿಕ ನೆಲೆಯಲ್ಲಿಯೇ ಇಂತಹ ಬಿಕ್ಕಟ್ಟು ಇರುವುದರಿಂದ ಎಲ್ಲಾ ಕನಸುಗಾರರ ಕನಸು ಫಲಿಸಲಾಗದೆ ಉಳಿದಿವೆಯೇ? ಇಂತಹ ಒಂದು ಪ್ರಶ್ನೆಯನ್ನು ಕವಿ ಕೇಳುತ್ತಿದ್ದಾನೆ. ಇದು ಈ ಇಪ್ಪತ್ತೊಂದನೆ ಶತಮಾನದಲ್ಲಿ ಕನ್ನಡ ಕಾವ್ಯ ಕೇಳಿಕೊಳ್ಳಬೇಕಾದ ಪ್ರಶ್ನೆಯೂ ಆಗಿದೆ.

## ಅಧ್ಯಾಯ – ೪

# ಸದ್ಯದ ಕನ್ನಡ ವಿಮರ್ಶೆ : ಒಂದು ನೋಟ

ಹೊಸಗನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದರೆ ವಿಮರ್ಶೆ ಕೃತಿಗಳನ್ನು ಬೆಲೆಕಟ್ಟುತ್ತಾ, ಮೌಲ್ಯವನ್ನು ಎತ್ತಿ ಹಿಡಿಯುತ್ತಲೇ ಬಂದಿದ್ದರೂ ಅದು ತೊಡಕುಗಳಿಂದ, ಗುಂಪುಗಾರಿಕೆಯಿಂದ ಮುಕ್ತವಾಗಿಯೇ ವರ್ತಿಸಿದೆ ಎಂದು ಹೇಳಲಾಗುವುದಿಲ್ಲ.

ಕಳೆದ ಎರಡು ದಶಕಗಳಲ್ಲಿ ಬಂದಿರುವ ವಿಮರ್ಶೆಗಳನ್ನು ಗಮನಿಸಿದರೆ ವಿಮರ್ಶೆಯೂ ಕೂಡ ನಮ್ಮ ಸಮಾಜದಂತೆ ಬಿಕ್ಕಟ್ಟನ್ನು ಅನುಭವಿಸುತ್ತಿರುವುದು ಕಂಡು ಬರುತ್ತದೆ. ಇದಕ್ಕೆ ಸಂಬಂಧಿಸಿದಂತೆ ಮುನ್ನುಡಿ–ಬೆನ್ನುಡಿಗಳು ಕೂಡ ಓದುಗರನ್ನು ದಾರಿ ತಪ್ಪಿಸುತ್ತಿವೆ, ಒಂದು ಏಣಿಯಂತೆಯೇ ವರ್ತಿಸುತ್ತಿವೆ. ಈ ಹಿಂದೆ ವಿಮರ್ಶೆಯಲ್ಲಿ ತೊಡಗಿದ್ದವರು ಸಾಂಸ್ಕೃತಿಕ ಅಧ್ಯಯನ, ಅನುವಾದಗಳಲ್ಲಿ, ಸಂಸ್ಕೃತಿ ಚಿಂತನೆಯಲ್ಲಿ ಕ್ರಿಯಾಶೀಲರಾಗಿರುವುದು ಕೂಡ ಮುಖ್ಯ ಸಂಗತಿಯಾಗಿದ್ದು ಒಂದು ಪಲ್ಲಟದ ದ್ಯೋತಕವಾಗಿದೆ. 'ಪ್ರಾಯೋಗಿಕ ವಿಮರ್ಶೆ'ಯನ್ನು ಮಾಡುವ ಮನಸ್ಸು ಕಳೆದು ಹೋಗಿದೆ. ಇದಕ್ಕೆ ಭಿನ್ನವಾಗಿ ಪ್ರತಿಕ್ರಿಯೆಯ ರೂಪವಾಗಿ ಇಲ್ಲಿ ಯಾರು ಮುಖ್ಯರಲ್ಲ, ಎನ್ನುವ ಮಾದರಿಗಳು ಹೊಸದಾಗಿ ಹುಟ್ಟಿಕೊಳ್ಳುತ್ತಿವೆ. ಮತ್ತೆ ಮತ್ತೆ ಪರಿಕಲ್ಪನೆ, ಮರುಓದು, ರಾಜಕೀಯ ವಿಶ್ಲೇಷಣೆ, ಸಾಂಸ್ಕೃತಿಕ ಮುಖಾಮುಖಿ ಹೆಚ್ಚುತ್ತಿವೆ. ಇದು ನಮ್ಮ ಕಾಲದ ತುರ್ತು ಕೂಡ ಆಗಿದ್ದು, ಒಂದು ಕಲಾಕೃತಿಯನ್ನು ಕಲೆಗಾಗಿ ಮಾತ್ರವೇ ನೋಡುವ ಪರಿಪಾಠದಾಚೆಗಿನ ನೋಟಗಳು ದಟ್ಟವಾಗು–ತ್ತಿರುವುದನ್ನು ಇವು ಸಾರುತ್ತಿವೆ. ಈ ನಡುವೆ ಕಲಾಕೃತಿಯನ್ನು ಎದುರಿಗಿಟ್ಟು ಕಲಾವಿಮರ್ಶೆಗೆ ಸಜ್ಜಾಗಿರುವ ವಿಮರ್ಶಕರ ವಿಮರ್ಶೆಗಳು ಹೇಗಿವೆ ಎಂದರೆ,

ಒಂಟೆಯ ಮದುವೆ,
ಕತ್ತೆಯ ಗಾಯನ
ಹೊಗಳಿಟ್ಟಿದ್ದವು
ಒಂದಿನ್ನೊಂದನ!
ಒಹೋ, ನೀ ರೂಪದ ಖನಿ!
ಆಹಾ, ನಿಂದದ್ಭುತ ದನಿ!!

(ಪರಸ್ಪರ: ಶಾ.ಬಾಲುರಾವ್)

ಇಂತಹ 'ಪರಸ್ಪರ' ವಿಮರ್ಶೆಯೂ ಕನ್ನಡದಲ್ಲಿ ಸದ್ಯ ಚಾಲ್ತಿಯಲ್ಲಿದೆ. ಹೀಗಿದ್ದರೂ ಕೆಲವರು ಈ ಹಾದಿಯಲ್ಲಿ ಪ್ರಾಮಾಣಿಕ ಪ್ರಯತ್ನ ನಡೆಸಿದ್ದಾರಾದರೂ ಅಲ್ಲಿಯೂ ವ್ಯಕ್ತಿ

ನಿಷ್ಠತೆಗೆ ವಾಲಿರುವ ಸೂಚನೆಗಳು ಸಿಗುವುದರಿಂದ ಮತ್ತೆ ತೊಡಕುಗಳು ಕಾಣಿಸಿಕೊಳ್ಳುತ್ತವೆ.

'೮೦-೯೦ರ ದಶಕದಲ್ಲಿ ಬಂಡಾಯ ಸಾಹಿತ್ಯ ಮತ್ತು ಇತರೆ ಪ್ರಗತಿಪರ ಜನಪರ ಚಳುವಳಿಗಳು ಸೃಷ್ಟಿಸಿದ ವಾತಾವರಣದಿಂದಾಗಿ ನಮ್ಮ ಜನ ಸಮೂಹಗಳ ಅಧೋಲೋಕದೊಳಗಿನಿಂದ ಎಷ್ಟೋ ಅನುಭವಗಳು ತಮ್ಮ ತನವನ್ನು ಆವಿಷ್ಕರಿಸಿಕೊಳ್ಳುವ ಬಾಯಿ ಪಡೆದುಕೊಳ್ಳುತ್ತಿವೆ. ಬಂಡಾಯ ಕಾವ್ಯ ಈಗ ಪ್ರಧಾನ ಅಭಿವ್ಯಕ್ತಿ ಮಾರ್ಗವಾಗಿ ಉಳಿದುಕೊಂಡಿಲ್ಲದಿರಬಹುದು ಆದರೆ ಅದು ಸೃಷ್ಟಿಸಿದ ಒತ್ತಾಸೆ, ಈ ನೆಲದ ಬೇರುಗಳ ಬುಡಗಳವರೆಗೆ ತಲುಪಿದೆ ಅದು ದನಿಯಾಗಿ ಹೊಮ್ಮ ತೊಡಗಿದೆ.[೧]

ಹೊಸಗನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದರೆ, ಬಿ.ಎಂ.ಶ್ರೀ. ಮೊದಲುಗೊಂಡು ಕ್ರಮೇಣ ನಿಧ ನಿಧಾನಕ್ಕೆ ಶೂದ್ರ- ತಳ ಸಮುದಾಯಗಳು ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿಸಿಕೊಂಡಿರುವ ಉದಾಹರಣೆಯಿದೆ. ಇದು ಆಯಾ ಕಾಲಘಟ್ಟದ ಸಾಹಿತ್ಯ ಪಂಥ-ಭೇದವನ್ನು ನಿರ್ದೇಶಿಸುತ್ತಾ, ಪ್ರಶ್ನಿಸುತ್ತಾ ಮುಖಾಮುಖಿಯಾಗುತ್ತಲೇ ಬಂದಿದೆ. ಪಂಡಿತರು, ಆಚಾರ್ಯರು ಇವರ ನಡುವೆ ತಳಸಮುದಾಯಗಳು ಹೆಚ್ಚು ಬರವಣಿಗೆಗೆ ತೊಡಗಿದ್ದರೂ ಈ ಕಾಲದ ಮುಖ್ಯ ಕವಿಗಳ ಹುಡುಕಾಟ ನಡೆದೇ ಇದೆ.

'ಈಚೆಗೆ ಕನ್ನಡದಲ್ಲಿ ವ್ಯಕ್ತಿ ಕೇಂದ್ರಿತವಾದ ವಿಮರ್ಶಾ ಪದ್ಧತಿಯೊಂದು ಅದು ಹೊರಟು ಹೋಯಿತು ಎಂಬ ಹೊತ್ತಿಗೆ ಮತ್ತೆ ತಲೆಯೆತ್ತಿಕೊಂಡಿರುವುದು ಕಾಣಿಸುತ್ತದೆ. ಇದು ಆಧುನಿಕ ಕನ್ನಡ ಸಾಹಿತ್ಯದಲ್ಲಿ ನಾಲ್ಕೇ ಮಂದಿ ಲೇಖಕರು, ಕಾವ್ಯದಲ್ಲಿ ಮೂರೇ ಮಂದಿ ಕವಿಗಳು, ವಿಮರ್ಶೆಯಲ್ಲಿ ಬರೇ ಇಬ್ಬರು ಎಂಬಿತ್ಯಾದಿಯಾಗಿ 'ಚಿರಾಯು'ಗಳನ್ನು ಹೆಕ್ಕಿ ತೆಗೆದು ಅವರನ್ನು ಸ್ವರ್ಗಕ್ಕೆ ಕಳಿಸುತ್ತೇವೆನ್ನುವ ಯಜಮಾನ ಸಂಸ್ಕೃತಿಯ ಅವಶೇಷವೆನ್ನುವುದರಲ್ಲಿ ಸಂದೇಹವಿಲ್ಲ.[೨]

ಕೆ.ವಿ. ತಿರುಮಲೇಶರ ಎಚ್ಚರಿಸುವ ಮಾತಿಗೆ ಹಲವು ಉದಾಹರಣೆಗಳು ಸಿಗಲಿವೆ. 'ಸಮಕಾಲೀನವಾದ ಜಾಗತಿಕ, ರಾಷ್ಟ್ರೀಯ ಹಾಗೂ ಸಾಂಸ್ಕೃತಿಕ ವಿದ್ಯಮಾನಗಳಿಗೆ ಅತ್ಯಂತ ತೀವ್ರವಾಗಿ ಸ್ಪಂದಿಸಿ, ಎಲ್ಲ ಸಂದರ್ಭಗಳಲ್ಲಿಯೂ ಆಧುನಿಕವಾದ, ಜನಪರವಾದ ನಿಲುವುಗಳನ್ನು ತೆಗೆದುಕೊಂಡ ಮತ್ತು ಇವೆಲ್ಲವನ್ನೂ ಕವಿತೆಗಳ ಒಡಲಿನಲ್ಲಿಯೇ ಅಳವಡಿಸಿಕೊಂಡ ಅಪರೂಪದ ಕವಿಗಳಲ್ಲಿ ಮಾಲಗತ್ತಿಯವರೂ ಒಬ್ಬರು. ಎಚ್.ಎಸ್.ಶಿವಪ್ರಕಾಶ್ ಅವರನ್ನು ಹೊರತುಪಡಿಸಿದರೆ

---

೧. ಬಂಜಗೆರೆ ಜಯಪ್ರಕಾಶ್, ನೇಕಾರ, ಮುನ್ನುಡಿ
೨. ತಿರುಮಲೇಶ್.ಕೆ.ವಿ. ಕಾವ್ಯಕಾರಣ, ಪು. ೨೦೬.

ಇಷ್ಟು ಸಮರ್ಥವಾದ ಇನ್ನೊಂದು ನಿದರ್ಶನ ನನಗೆ ಹೊಳೆಯುತ್ತಿಲ್ಲ.[೧] ಇದ್ದುದರಲ್ಲಿ ಈಗ ಹೊಸತನ ತೋರುತ್ತಿರುವವರು ತುಮಕೂರಿನ ಮೂವರು ಕವಿಗಳು: ಎಸ್.ಜಿ.ಸಿದ್ದರಾಮಯ್ಯ ನವ್ಯದಿಂದ ಕಡ ತಂದು ಬಹುಪಾಲು ಬಳಸಿದ್ದ ತಮ್ಮ ಹಳೆಯ ರಾಚನಿಕ ಜಟಿಲತೆಗಳನ್ನು ತೊರೆದು, ತಮ್ಮ ಸೀಮೆಯ, ಜನಪದ ನುಡಿಗಟ್ಟಿನ ತೆಕ್ಕೆಗೆ ಸಿಗುವ ಅನುಭಾವಿಕ ಸತ್ಯಗಳನ್ನು ಮಂಜುಮಂಜಾಗಿಯಾದರೂ ಕಂಡರಿಸುತ್ತಿದ್ದಾರೆ. ಲಲಿತಾಸಿದ್ದಬಸವಯ್ಯ ಮೊದಲಬಾರಿಗೆ ಶೂದ್ರ ಹೆಂಗಸಿನ ಅನನ್ಯ ಸಂವೇದನೆಗಳನ್ನು ಅದರೆಲ್ಲ ಬಣ್ಣ, ವಾಸನೆ ಮತ್ತು ಸ್ಪರ್ಶಗಳೊಂದಿಗೆ ಕನ್ನಡ ಕಾವ್ಯಕ್ಕೆ ತಂದುಕೊಡುತ್ತಿದ್ದಾರೆ. ನಟರಾಜಬೂದಾಳು ಬದುಕನ್ನು ಕುರಿತ ಶಿಷ್ಟ-ಜಾನಪದ ನೋಟಗಳ ಹೊಸ ಸಂಶ್ಲೇಷಣೆಯೊಂದರಲ್ಲಿ ತೊಡಗಿದ್ದು, ತಮ್ಮದೇ ವಿಶಿಷ್ಟ ಕಾವ್ಯಾಭಿವ್ಯಕ್ತಿಯ ಪ್ರಾಮಾಣಿಕ ಪ್ರಯತ್ನದಲ್ಲಿದ್ದಾರೆ.[೨]

ಸದ್ಯದ ಕವಿತೆಗಳಲ್ಲಿ ಎಸ್.ಮಂಜುನಾಥ, ನಾ.ಮೊಗಸಾಲೆ, ಸಂಧ್ಯಾ ಇವರು ಸ್ವ-ಕಾವ್ಯ-ಲೋಕ ನಿರ್ಮಾಣದ ಕಷ್ಟದ ದಾರಿಯನ್ನು ಆರಿಸಿಕೊಂಡಿದ್ದಾರೆ.[೩] ಈಗ ಕವಿತೆ ಬರೆಯುತ್ತಿರುವ ಅನೇಕರಲ್ಲಿ ಅನುಭವ ಪ್ರಕ್ರಿಯೆ ಕುರಿತಾದ ಸರಿಯಾದ ತಿಳುವಳಿಕೆ ಕಾಣುತ್ತಿಲ್ಲವೆಂಬುದು ನನ್ನ ಅನಿಸಿಕೆ. ಕನ್ನಡದಲ್ಲಿ ಈಗ ಇರುವ ಓದು-ವಿಮರ್ಶಾ ವಾತಾವರಣ ಸಹ ಅಂಥ ತಿಳಿವಳಿಕೆಯನ್ನು ನೆಲೆಗೊಳಿಸುವಂತೆ ಇಲ್ಲವೆನಿಸುತ್ತದೆ. ಯಾರು ಮುಟ್ಟದೆ ನಾಚುವ ಹುಡುಗಿಯಂತೆ ಕೆಲವರು. ಅನುಭವಕ್ಕಿಂತ ತಾವು ದೊಡ್ಡರಾಗಿ ಅಹಂಭಾವ ಮೆರೆಯುವವರು ಕೆಲವರು. ಸುಮ್ಮನೆ ಇದ್ದರೆ ಅದು ತಾನಾಗೇ ಬಂದು ಮುಟ್ಟಬಹುದೆಂಬ ನಂಬಿಕೆಯಿರದೆ ಮೈಮೇಲೆ ಬಿದ್ದು ಆಗಿಸಿಕೊಳ್ಳುವ ಆಕ್ರಮಣಶೀಲರು ಕೆಲವರು; ಮತ್ತೆ ಕೆಲವರು ವಿಚಿತ್ರ ವಿನ್ಯಾಸದ ಉಕ್ತಿಗಳಿಂದಲೇ ಅಸಾಧಾರಣ ಅನುಭವ ಸೃಷ್ಟಿಯಾಗುತ್ತಿದೆಯೆಂದು ಭ್ರಮಿಸುವವರು.[೪] ಇಂತಹ ಅಭಿಪ್ರಾಯಗಳ ನಡುವೆಯೇ ಯುವಕವಿಗೆ ರೈನರ್ ಮಾರಿಯಾ ರಿಲ್ಕ್ ಪತ್ರಗಳು ಕನ್ನಡಕ್ಕೆ ಬಂದಿದೆ. ಇದು ಕಾವ್ಯವನ್ನು ಏಕಕಾರಿಯಾಗಿ ನೋಡುವಂತೆಯೇ ಮಾಡುತ್ತದೆಯೇ? ಎಂಬ ಅನುಮಾನವೂ ಇದೆ. ಆದರೆ ರಿಲ್ಕ್‌ನ ಕಾವ್ಯಶಕ್ತಿ ಯಾಕೆ ಅಗತ್ಯ ಎಂಬ ಪ್ರಶ್ನೆಯನ್ನು ಕನ್ನಡ ಮನಸ್ಸು ಬಹಳ ಹಿಂದೆಯೇ ಕೇಳಿಕೊಂಡಿದೆ.

'ಕನ್ನಡದಲ್ಲಿ ಬರೆಯುವ ಕುಕವಿಗಳ ಸಂಖ್ಯೆ ಇತ್ತೀಚೆಗೆ ತುಂಬಾ ಹೆಚ್ಚಿದೆ. ರಿಲ್ಕ್‌ನ ಮಾತುಗಳು ಕುಕವಿಗಳನ್ನೂ ಸೇರಿಸಿದಂತೆ ನಮ್ಮೆಲ್ಲರಿಗೆ ಬಹಳ

---

೧. ರಾಘವೇಂದ್ರರಾವ್.ಎಚ್.ಎಸ್., ಅರವಿಂದ ಮಾಲಗತ್ತಿ ಆಯ್ದ ಕವಿತೆಗಳು, ಪು. ೧೦

೨. ನಾಗಭೂಷಣ.ಡಿ.ಎಸ್. ಮೀನಿನ ಹೊಳಪನ್ನು ನೀರಿಗೆ ಬಿಟ್ಟು, ಮುನ್ನುಡಿ

೩. ನಾಗಭೂಷಣಸ್ವಾಮಿ.ಜಿ.ಎಲ್. ಇಹಪರದಕೊಳ, ಮುನ್ನಿಡಿ.

೪. ಮಂಜುನಾಥ್.ಎಸ್., ಅಗಣಿತಚಹರೆ, ಮುನ್ನಡಿ.

ಅಮೂಲ್ಯವಾದವುಗಳಾಗಿವೆ.[೧] ಈ ತಿಳುವಳಿಕೆಯ ಜೊತೆಗೆ ಇರಿಸಿಕೊಳ್ಳಬೇಕಾದ ಎಚ್ಚರವೆಂದರೆ, 'ಕನ್ನಡದ ಸಂದರ್ಭದಲ್ಲಿ ಕವಿತೆ ಮತ್ತು ಪತ್ರಿಕೆಗಳ ಸಂಬಂಧಗಳ ಕುರಿತು ವಿಮರ್ಶೆಗೂ ಅವಕಾಶವಿದೆ. ತಮಗೆ ಗೊತ್ತಿಲ್ಲದೆಯೇ ಕನ್ನಡದ ಹತ್ತಾರು ಪತ್ರಿಕೆಗಳು ಇಂದಿನ ಸಾಹಿತ್ಯಲೋಕದ ಬೆಳವಣಿಗೆಗಳನ್ನು ಪರೋಕ್ಷವಾಗಿ ನಿರ್ದೇಶಿಸುತ್ತಿವೆ.[೨]

ತಲ್ಲಣ, ಅಸ್ಪೃಶ್ಯತೆ ಹುಡುಕಾಟ, ಉತ್ಸಾಹ, ಉಮೇದುಗಳೆಲ್ಲವೂ ಸೇರಿದಂತಹ ಒಂದು ಸಂಕೀರ್ಣ ಸನ್ನಿವೇಶದಲ್ಲಿ ಬರೆಯುತ್ತಿರುವ ಹೊಸತಲೆಮಾರಿನ ಲೇಖಕರ ಬರೆಹದ ಮೂಲಕ, ಕನ್ನಡ ಸಾಹಿತ್ಯವು ೨೧ನೇ ಶತಮಾನದ ಈ ಮೊದಲ ಪಾದದಲ್ಲಿ ಹೊಸ ಹೊರಳಿಕೆಯನ್ನು ಪಡೆಯಲು ಯತ್ನಿಸುತ್ತಿದೆ. ಈ ತಲೆಮಾರಿನ ಬರೆಹ ದೊಡ್ಡ ಸಾಧನೆ ಮಾಡುವ ಸಾಧ್ಯತೆಗಳನ್ನಂತೂ ಪ್ರಕಟಿಸಿದೆ ನಿಸ್ಸಂಶಯವಾಗಿ ಹೊಸತಾದರೂ ಹುಟ್ಟುವ ಸಾಧ್ಯತೆಯಿರುವುದು ಈ ತಲೆಮಾರಿನಿಂದಲೇ. ಹೊಸ ಪಂಥವೊಂದು ಇಲ್ಲವೇ ಹೊಸಮಾರ್ಗವೊಂದು ಹುಟ್ಟುತ್ತಿದೆಯೇ ಎಂಬ ಪ್ರಶ್ನೆ ಇಲ್ಲಿ ಅಸಂಗತ.[೩] ಇವುಗಳೊಟ್ಟಿಗೆ ಮುಖ್ಯವೆನಿಸುವುದು; ಯೋಚಿಸಬೇಕಾದದ್ದು ಎಂದರೆ,

'ಈ ಶತಮಾನದ ಬಹುಪಾಲನ್ನು ಕಾಡಿದ ರಾಜಕೀಯ ಮೂಲಭೂತವಾದದ ಯುಗವೇನೋ ಕೊನೆಯಾಗುತ್ತಿದೆ, ಆದರೆ ಅದರ ಜಾಗವನ್ನು ಧಾರ್ಮಿಕ ಮೂಲಭೂತವಾದ ಆಕ್ರಮಿಸುವ ಲಕ್ಷಣಗಳು ಸ್ಪಷ್ಟವಾಗಿ ಕಾಣುತ್ತಿವೆ. ಮತ್ತೊಮ್ಮೆ ಮಾನವೀಯತೆಯ ಮೇಲೆ ಕ್ರೌರ್ಯ, ದಬ್ಬಾಳಿಕೆ, ದಮನಗಳನ್ನು ಇದು ಹೇರಿ ಇಪ್ಪತ್ತೊಂದನೆ ಶತಮಾನವನ್ನು ರಕ್ತಸಿಕ್ತಗೊಳಿಸುವ ಮೊದಲು'[೪] ಕಾವ್ಯವಾಗಲಿ, ಸಮಾಜವಾಗಲಿ ಇಂತಹ ಬಿಕ್ಕಟ್ಟನ್ನು ಹೇಗೆ ಎದುರುಗೊಳ್ಳುವುದು ಎಂಬುವ ವಿಚಾರ ಜವಾಬ್ದಾರಿಗೆ ಸಂಬಂಧಿಸಿದೆ. ಇದೊಂದು ದೊಡ್ಡ ಸವಾಲಾಗಿದೆ.

---

೧. ರಾಮಚಂದ್ರದೇವ, ಮಾತುಕತೆ, ಪು. ೧೦೨.
೨. ರವೀಂದ್ರಕುಮಾರ್.ಜಿ.ಕೆ. ಕವಿತೆ, ೨೦೦೧, ಪು. ೬
೩. ರಹಮತ್‌ತರಿಕೆರೆ, ಹೊಸತಲೆಮಾರಿನ ತಲ್ಲಣ, ಪು. ೧೮೬
೪. ಪೂರ್ಣಚಂದ್ರತೇಜಸ್ವಿ, ಮಹಾಪಲಾಯನ, ಲೇಖನ ಮಾತು

# ಉಪಸಂಹಾರ

ಮೂಲಭೂತವಾದ, ಜಾತೀಯತೆ, ಹಿಂಸೆ, ಆರ್ಥಿಕಬಿಕ್ಕಟ್ಟು ಇವುಗಳ ಮಧ್ಯೆಯೂ ಕನ್ನಡ ಕಾವ್ಯ ಮನುಷ್ಯತ್ವಕ್ಕಾಗಿ ಮಿಡಿಯುತ್ತಲೇ ಬಂದಿದೆ. ಆದರೆ ಸಾಹಿತ್ಯ ಅಥವಾ ಕಾವ್ಯವನ್ನು ದುಂಡಾಗಿ ನಾಲ್ಕು ಗೋಡೆಯ ಮಧ್ಯೆ ನಡೆದು, ವಿಚಾರ ಸಂಕಿರಣಗಳಲ್ಲಿ ವಿಷಯ ಮಂಡಿಸಿ ಸ್ವಯಂ ಸಮಾಧಾನ ಮಾಡಿಕೊಂಡರೆ ಸಾಕೆ? ಇಂತಹ ಪ್ರಶ್ನೆಯನ್ನು ಸಾಹಿತ್ಯ ಹಿಂದೆಯೂ ಕೇಳಿಕೊಂಡಿತ್ತು. ಆದರೆ ಮತ್ತೆ ಕೇಳಿಕೊಳ್ಳಬೇಕಾದ ಒತ್ತಡ ಹೆಚ್ಚಿದೆ.

'ಸಾಹಿತ್ಯವನ್ನು ಕೇವಲ ರಸಾರ್ಥಿಗಳಾಗಿ ಮಾತ್ರ ಓದಿ ಹಾಗೂ ಕವಿಗಳನ್ನು ಕಾವ್ಯಗಳನ್ನು ರಾಜಾಸ್ಥಾನದ ಉತ್ತಮ ವಿನೋದಗಳನ್ನಾಗಿ ಹೆಚ್ಚಾಗಿ ಪರಿಪಾಲಿಸಿರುವ ಈ ಭಾರತೀಯ ಸಂಪ್ರದಾಯಕ್ಕೆ ಸಹೃದಯ ಪ್ರಜ್ಞೆಗೆ ಕಾವ್ಯ ವಹಿಸಿಕೊಂಡಿರುವ ಈಗಿನ ಸಂಕೀರ್ಣ ಜವಾಬ್ದಾರಿಯ ಅರಿವು ಆಗದಿರಬಹುದು....... ಒಂದು ಬಗೆಯ ಆತ್ಮವಂಚನೆ ಹಾಗೂ ಮುಖಹೇಡಿತನ ಮೂಲವಾದುದಾಗಿರಬಹುದು. ಏನು ಬಂದರೂ ಎದುರಿಸುತ್ತೇನೆಂದು ಧೈರ್ಯದಿಂದ ಸತ್ಯಾರ್ಥಿಯಾಗುವ ಸ್ವಭಾವ ವಾಸ್ತವ ನಿಷ್ಠೆಗಳು ಕಡಿಮೆಯಾಗುವುದರಿಂದ ಇದು ಸಂಭವಿಸಬಹುದು. ಕನ್ನಡ ಸಂಸ್ಕೃತಿಯ ನವೋದಯದ ಸಂದರ್ಭದಲ್ಲಿನ ಒಂದು ಘಟನೆಯನ್ನು ತೆಗೆದುಕೊಂಡರೆ ಇದು ಅರಿವಾಗುತ್ತದೆ. ಕುವೆಂಪುರವರು 'ಶೂದ್ರತಪಸ್ವಿ' ನಾಟಕ ಬರೆದಾಗ ಮಾಸ್ತಿಯವರು ಸಂಕುಚಿತ ಜಾತೀಯ ಭಾವನೆ ಇರಬಹುದೆಂದು ಶಂಕಿಸಿ ವಿಮರ್ಶೆ ಬರೆದರು. ಇಲ್ಲವೆಂದು ತಿರಸ್ಕರಿಸಿ ಕುವೆಂಪುರವರು ಮಾರ್ನುಡಿಯಲ್ಲಿ ವಿವರಿಸಿದರು. ಇಂಥದೊಂದು ಆಸ್ಫೋಟಕ ಸಾಮಗ್ರಿಯ ಮೇಲೆ ಎಂಥ ದಿಟ್ಟ ವಿಮರ್ಶೆ, ವಿವಾದ ನಡೆದಿತ್ತೆಂಬುದು ಆ ಯುಗದ ಸತ್ವಪೂರ್ಣತೆಗೆ, ಆರೋಗ್ಯಕ್ಕೆ ಸಾಕ್ಷಿ. ಈಗ ಆ ಸಾಮರ್ಥ್ಯ ಎಷ್ಟರಮಟ್ಟಿಗೆ ನಶಿಸಿದೆಯೆಂದರೆ ಯಾರಿಗೂ ಮುಖಮುಖಿಯಾಗಿ ಇದಿರಾಗುವ ಸಾಮರ್ಥ್ಯವೇ ಇಲ್ಲ.'[೧] ಇಂತಹ ಮಾತುಗಳು ಸಾಹಿತ್ಯದೊಳಗಿದ್ದು ಸಾಹಿತ್ಯದಾಚೆಗಿನ ಒಳನೋಟ ನಮ್ಮ ಕಾವ್ಯಕ್ಕೆ, ವಿಮರ್ಶೆಗೆ ಇನ್ನೂ ಬರಬೇಕಿದೆ.

ಈ ಪ್ರಬಂಧದಲ್ಲಿ ಕಾವ್ಯವನ್ನಷ್ಟೆ ಮುಖ್ಯವಾಗಿಟ್ಟುಕೊಂಡು ಸಮಕಾಲೀನವಾದ ಸಂಕಟ-ಬಿಕ್ಕಟ್ಟುಗಳಿಗೆ ಹೆಚ್ಚು ಒತ್ತು ಕೊಡಲಾಗಿದೆ. ನಾವು ಎದುರಿಸುತ್ತಿರುವ ಸಮಸ್ಯೆಯನ್ನು ಬಿಟ್ಟು ಬರೆಯಲು ಸಾಧ್ಯವಿಲ್ಲ ಎನ್ನುವ ದನಿ ಪ್ರಧಾನವಾಗಿ ಈ ಪ್ರಬಂಧದಲ್ಲಿ ಸಾಮೂಹಿಕವಾಗಿ ವ್ಯಕ್ತವಾಗಿದೆ. ಇದರ ನಡುವೆಯೂ ಯಾವುದೇ ಬಾಧೆಗೆ ಒಳಗಾಗಿಲ್ಲದಿರುವಂತೆ ಲೋಲುಪ್ತವಾಗಿ ಎಸ್.ಮಂಜುನಾಥ್, ನ.ಮೊಗಸಾಲೆ

---

೧. ಪೂರ್ಣಚಂದ್ರತೇಜಸ್ವಿಕೆ.ಪಿ, ವ್ಯಕ್ತಿ ವಿಶಿಷ್ಟ ಸಿದ್ಧಾಂತ, ಪು. ೫-೬

ಇಂತಹವರ ಕಾವ್ಯ-ಕಾವ್ಯ ರಚನೆ ನಡೆಯುತ್ತಿದೆ. ಈ ಪ್ರಬಂಧದಲ್ಲಿ ಆಯ್ದುಕೊಂಡಿರುವ ಕವಿಗಳು ೨೧ನೇ ಶತಮಾನದ ಸಶಕ್ತ ಧ್ವನಿಗಳು. ಇವರೆಲ್ಲರೂ ಮುಖ್ಯಧಾರೆಯಲ್ಲಿ ಕನ್ನಡ ಕಾವ್ಯವನ್ನು ಒಟ್ಟಾಗಿ ಪ್ರತಿನಿಧಿಸುತ್ತಾರೆ. 'ಒಟ್ಟಾಗಿ' ಎಂದು ಏಕೆ ಹೇಳಬೇಕಿದೆ ಎಂದರೆ ಕನ್ನಡ ಕಾವ್ಯವನ್ನು ಪ್ರತಿನಿಧಿಸುವ ಏಕೈಕ ಕವಿಯ ಪರಿಕಲ್ಪನೆಯನ್ನು ಸದ್ಯದಲ್ಲಿ ಊಹಿಸಿಕೊಳ್ಳಲು ಕಷ್ಟವಾಗುತ್ತಿದೆ.

ಹೊಸ ತಲೆಮಾರಿನ ಕವಿತೆಗಳಲ್ಲಿ ಎಸ್.ಜಿ.ಸಿದ್ದರಾಮಯ್ಯ, ಶಿವಪ್ರಕಾಶ್, ಸಿದ್ದಲಿಂಗಯ್ಯ, ಪ್ರತಿಭಾನಂದಕುಮಾರ್ ಇವರ ಪ್ರಭಾವ ಢಾಳಾಗಿ ಕಾಣಿಸುತ್ತದೆ. ಕೆಲವರು ಮೀರಿ ಮುನ್ನಡೆಯುತ್ತಿರುವ ಕುರುಹುಗಳು ವ್ಯಕ್ತವಾಗಿರುವುದನ್ನು ಚರ್ಚಿಸಲಾಗಿದೆ.

ಮುಖ್ಯವಾಗಿ ಇಪ್ಪತ್ತೊಂದನೆ ಶತಮಾನದ ಕನ್ನಡ ಕಾವ್ಯದಲ್ಲಿ ವಸ್ತು, ವಿಷಯ ಮುಖ್ಯವಾಗಿ ರೂಪ-ಪ್ರಭೇದ ಪ್ರಜ್ಞೆ ಕವಿಗಳಲ್ಲಿ ಅವಜ್ಞೆಗೆ ಒಳಗಾಗುತ್ತಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು. ಕಾವ್ಯದಲ್ಲಿ ವ್ಯಕ್ತವಾಗುತ್ತಿರುವ ಅಖಂಡ ಮಾನವ ಪ್ರೇಮ ಹೆಚ್ಚುತ್ತಿದೆ. ಆದರೆ ಸಮಾಜದಲ್ಲಿ ಹಿಂಸೆ, ಕೊಲೆ, ಶೋಷಣೆ ಹೆಚ್ಚಾಗುತ್ತಿರುವುದನ್ನು ಗಮನಿಸಿದಾಗ ಕಾವ್ಯಕ್ಕು ಸಮಾಜಕ್ಕೂ ಸಂಬಂಧವಿದೆಯೇ? ಕಾವ್ಯ ಹೊರಗಿನ ಜಗತ್ತಿಗೆ ಬೇಕೆ? ಅಥವಾ ಕಾವ್ಯವೆನ್ನುವುದು ಕಡೆಗೂ ಒಂದು ದ್ವೀಪವಾಗಿ ಉಳಿದುಬಿಡುವುದೇ? ಎಂಬ ಪ್ರಶ್ನೆ ಆತಂಕ ಹಾಗೆಯೇ ಉಳಿದುಕೊಳ್ಳುತ್ತದೆ.

# ಅನುಬಂಧಗಳು

## ಅನುಬಂಧ-೧

## ಪರಾಮರ್ಶನ ಗ್ರಂಥಗಳು


೧. ಆನಂದಮೂರ್ತಿ. ಜಿ.ವಿ. ನೀರಗಂಧ, ೨೦೦೭
ಬೋಧಿಶ್ರೀ ಪ್ರಕಾಶನ, ತುಮಕೂರು

೨. ಆಲೂರುದೊಡ್ಡನಿಂಗಪ್ಪ ನೇಕಾರ, ೧೯೯೯,
ಕ್ರಾಂತಿಸಿರಿ ಪಬ್ಲಿಕೇಷನ್ಸ್,
ಬೆಂಗಳೂರು.

೩. ಜಯಂತಕಾಯ್ಕಿಣಿ ಶಬ್ದತೀರ, ೨೦೦೬
ಅಂಕಿತ ಪುಸ್ತಕ, ಬೆಂಗಳೂರು

೪. ತಿರುಮಲೇಶ್.ಕೆ.ವಿ ಕಾವ್ಯ ಕಾರಣ, ೨೦೦೭
ಕನ್ನಡ ವಿಶ್ವವಿದ್ಯಾಲಯ, ಹಂಪಿ

೫. ಪೂರ್ಣಚಂದ್ರತೇಜಸ್ವಿ.ಕೆ.ಪಿ ಮಹಾಪಲಾಯನ, ೧೯೯೯
ಪುಸ್ತಕ ಪ್ರಕಾಶನ, ಮೈಸೂರು

೬. ಪೂರ್ಣಚಂದ್ರತೇಜಸ್ವಿ.ಕೆ.ಪಿ ವ್ಯಕ್ತಿ ವಿಶಿಷ್ಟ ಸಿದ್ಧಾಂತ, ೧೯೬೪
ಪುಸ್ತಕ ಪ್ರಕಾಶನ, ಮೈಸೂರು.

೭. ಮಮತಾ ಜಿ. ಸಾಗರ ಹೀಗೆ ಹಾಳೆಯ ಮೇಲೆ ಹಾಡು
೨೦೦೭, ಅಭಿನವ ಪ್ರಕಾಶನ, ಬೆಂಗಳೂರು

೮. ಮೊಗಸಾಲೆ, ನಾ ಇಹಪರದ ಕೊಳ, ೨೦೦೬,
ಸುಮುಖ ಪ್ರಕಾಶನ, ಬೆಂಗಳೂರು

೯. ರಹಮತ್ ತರೀಕೆರೆ ಕತ್ತಿಯಂಚಿನ ದಾರಿ, ೨೦೦೬,
ಅಭಿನವ ಪ್ರಕಾಶನ, ಬೆಂಗಳೂರು

೧೦. ರಹಮತ್ ತರೀಕೆರೆ ಹೊಸ ತಲೆಮಾರಿನ ತಲ್ಲಣ, ೨೦೦೮
ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

೧೧. ರಾಮಚಂದ್ರದೇವ ಮಾತುಕತೆ, ೧೯೯೭
ಕರ್ನಾಟಕ ಸಂಘ, ಪುತ್ತೂರು

೧೨. ರಾಘವೇಂದ್ರರಾವ್,ಎಚ್.ಎಸ್. ಅರವಿಂದ ಮಾಲಗತ್ತಿ ಅವರ ಆಯ್ದ
ಕವಿತೆಗಳು, ೨೦೦೪, ಕನ್ನಡ ಪುಸ್ತಕ
ಪ್ರಾಧಿಕಾರ, ಬೆಂಗಳೂರು

೧೩. ವಸಂತ ಬನ್ನಾಡಿ — ಮೀನಿನ ಹೊಳಪನ್ನು ನೀರಿಗೇ ಬಿಟ್ಟು, ೨೦೦೮, ತಿಂಗಳ ಬೆಳಕು ಪ್ರಕಾಶನ, ಕುಂದಾಪುರ

೧೪. ಸಂದೀಪ ನಾಯಕ — ಅಗಣಿತ ಚಹರೆ, ೨೦೦೫, ಸಂಚಯ ಪ್ರಕಾಶನ, ಬೆಂಗಳೂರು

# ಅನುಬಂಧ-೨

## ಪತ್ರಿಕೆಗಳು

೧. ಸಂಕ್ರಮಣ — ಸಂ: ಚಂದ್ರಶೇಖರ ಪಾಟೀಲ

೨. ಸಂಚಯ — ಸಂ: ಡಿ.ವಿ.ಪ್ರಹ್ಲಾದ್

೩. ಕವಿತೆ ೨೦೦೧ — ಸಂ: ಜಿ.ಕೆ.ರವೀಂದ್ರಕುಮಾರ್,
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

